N.P. Upadhye.

ದ್ವಿತೀಯ ಕುಸುಮ

ಶ್ರೀ ಚಂದ್ರನಾಥ ಗ್ರಂಥಮಾಲಾ

# ನಾಗಸ್ತ್ರೀ



ಪ್ರಕಾಶಕರು:—

ಶ್ರೀಚಂದ್ರನಾಥ ಸಂಗೀತ ಸಮಾಜದವರು

ಹುಬ್ಬಳ್ಳಿ.



( ಮಹಾವೀರ ಶಕೆ ೨೪೬೦ )



ಸನ್ ೧೯೩೪

ಬೆಲೆ:— ಸದುಪಯೋಗ

॥ ಶ್ರೀ ವೀತರಾಗಾಯನಮಃ ॥

ಶ್ರೀ ಚಂದ್ರನಾಥ ಗ್ರಂಥಮಾಲೆಯ
ದ್ವಿತೀಯ ಕುಸುಮ.

# ನಾಗಶ್ರೀ.

ಪ್ರಕಾಶಕರು:—

ಶ್ರೀ ಚಂದ್ರನಾಥ ಸಂಗೀತ ಸಮಾಜದವರು
ಹುಬ್ಬಳ್ಳಿ.

( ಮಹಾವೀರ ಶಕೆ ೨೪೬೦ )

೧೯೩೪

ಬೆಲೆ )                ( ಸದುಪಯೋಗ

|| ಶ್ರೀ ವೀತರಾಗಾಯನಮಃ ||


ಚಂದ್ರನಾಥ ಸಂಗೀತ ಸೇವಾ ಸಮಾಜ
ಹುಬಳಿ
ಬಂದೇ
ಜಿನವರಂ
BY.M.N.KASTURI
DATE. 20.9.31.
ಸ್ಥಾಪನಾ ೧.೧೦.೩೦.

# ಪೀಠಿಕೆ.

**ಮಹಾಶಯರೆ,!**

ಈಗಿನ ಕಾಲದಲ್ಲಿ ಯಾರಾದರು ಜೈನರನ್ನು ಕುರಿತು "ನೀವು ಏತಕ್ಕೆ ಹೊತ್ತುಯಿರುವ [ಸುರ್ಯನಿರುವ] ಸಮಯದಲ್ಲೇ ಊಟಮಾಡುತ್ತೀರಿ? ರಾತ್ರಿಯಲ್ಲಿ ಏಕೆ ಊಟಮಾಡುವುದಿಲ್ಲ" ವೆಂದು ಪ್ರಶ್ನೆಮಾಡಿದಲ್ಲಿ "ನಮ್ಮ ಹಿರಿಯರು ಹಾಗೆ ಮಾಡುತ್ತಾ ಬಂದಿರುವುದರಿಂದ ನಾವು ಸಹ ಹಾಗೇಮಾಡುತ್ತೇವೆಂದು ಹೇಳುವವರೆ ಬಹುಜನರಿರುತ್ತಾರಲ್ಲದೆ ಸಕಾರಣವನ್ನು ತಿಳಿಸುವ ಜನರು ವಿರಳ, ಅತಿವಿರಳರೆಂದೂ ಹೇಳಬಹುದು. ಇದಕ್ಕೆ ಕಾರಣವು ಜೈನ ಧರ್ಮ ಗ್ರಂಥಗಳೆಲ್ಲಾ ಬಹುತರವಾಗಿ ಸಂಸ್ಕೃತ, ಪ್ರಾಕೃತ, ಮಾಗಧಿ, ಹಳೆಗನ್ನಡ ಮುಂತಾದ ಭಾಷೆಗಳಲ್ಲಿ ಬರೆದುವಾಗಿರುತ್ತವೆ, ಆ ಭಾಷೆಯನ್ನು ಕಲಿಯದ ವಿನಹ ಅವುಯಾರಿಗೂ ತಿಳಿಯುವಂತಿಲ್ಲ. ಸರ್ವಸಾಧಾರಣವಾಗಿ ಹೊಸಗನ್ನಡದಲ್ಲಿ ಜೈನ ಗ್ರಂಥಗಳು ಅತಿ ಸ್ವಲ್ಪವಿರುವುವೆಂದು ಹೇಳಬಹುದು. ಇತ್ತೀಚೀಗೆ ಮೈಸೂರಿನ ಜೈನ ಅಸೋಸಿಯೇಷನ್ನಿನವರು. ಜೈನ ಧರ್ಮದ ಗ್ರಂಥಗಳನ್ನು ಕನ್ನಡದಲ್ಲಿ ಬರೆದು ಪ್ರಕಟಿಸುತ್ತಿರುವು ದು ನಮ್ಮ ಸುದೈವವೇಂದೇ ಭಾವಿಸುತ್ತೇವೆ. ಅಸ್ತು.

ಸೂರ್ಯೋದಯಾ ನಂತರ ಎರಡುಗಳಿಗೆಯಿಂದ ಸೂರ್ಯಾಸ್ತಮಕ್ಕೆ ಎರಡುಗಳಿಗೆ ಇರುವವರೆಗೆ ಊಟಮಾಡುವ ನಿಯಮಕ್ಕೆ "ಅಹೋಶ" ವ್ರತವೆಂದೆಂನ್ನುತ್ತಾರೆ [ಹಗಲು ಹೊತ್ತಿನಲ್ಲಿ ಊಟಮಾಡುವ ವ್ರತ] ಹೋಸವೆಂಬ ಶಬ್ದವು "ಅಹೋಶ" ಎಂಬುದರ ಅಪಭ್ರಂಶರೂಪವಾಗಿರುತ್ತದೆ. ಈಗ ಜೈನರಲ್ಲಿ ಹೋಸ ಎಂಬ ಶಬ್ದವನ್ನು ಸಾಯಂಕಾಲ ಹೊತ್ತುಯಿರುವಾಗಲೇ ಊಟಮಾಡುವುದಕ್ಕೆ ಮಾತ್ರ ಹೇಳುವ ಪರಿಪಾಠ ಬಿದ್ದಿರುತ್ತದೆ.

ಸೂರ್ಯನ ಕಿರಣದ ಉಷ್ಣತೆಯಿಂದ ಹಗಲುಹೊತ್ತಿನಲ್ಲಿ ಸುಳಿದಾಡದೆಯಿದ್ದಂಥ ಸೂಕ್ಷ್ಮಜೀವರಾಸಿಗಳು ರಾತ್ರಿಯಲ್ಲಿ ಹುಟ್ಟಿ ಸಂಚರಿಸುತ್ತವೆ. ದೀಪಕ್ಕೇನೇ ಎಷ್ಟೋ ಜೀವಗಳು ಬಂದು ಬಿದ್ದು ಸಂಕಟಕ್ಕೀಡಾಗಿ ಸಾಯುತ್ತಿ

ರುವದನ್ನು ನೋಡುತ್ತೇವೆ ಅಡಿಗೆ ಮಾಡುವುದರಿಂದುಂಟಾದ ಹೊಗೆ ಬೆಂಕಿ ಮೊದಲಾದ ಪದಾರ್ಥಗಳಿಂದ ಎಷ್ಟು ಜೀವ ಹಿಂಸೆಯಾಗಲಿಕ್ಕಿಲ್ಲ! ರೋಗೋತ್ಪಾಧಕವಾದ ಎಷ್ಟೋ ಸೂಕ್ಷ್ಮ ಜೀವ ಜಂತುಗಳು ರಾತ್ರಿ ಕಾಲದಲ್ಲಿಯೇ ಉತ್ಪನ್ನವಾಗುವುದರಿಂದ ಇಂಥ ತ್ರಸ–ಸ್ಥಾವರ ಜೀವಗಳ ಘಾತವಾಗಬಾರದೆಂದೂ, ರಾತ್ರಿ ಊಟ ಮಾಡುವುದರಿಂದ ಜೈನ ಧರ್ಮದ ಮುಖ್ಯ ತತ್ವವಾದ ಅಹಿಂಸಾ ವ್ರತವನ್ನು ಪಾಲನೆಮಾಡಿದಂತಾಗುವುದಿಲ್ಲವೆಂದೂ, ಅಲ್ಲದೆ ಆರೋಗ್ಯ ದೃಷ್ಟಿಯಿಂದಾದರೂ ಒಳ್ಳೆಯದಲ್ಲವೆಂದೂ ತಿಳಿದು ಜೈನರು ರಾತ್ರಿಯಲ್ಲಿ ಊಟ ಮಾಡುವದಿಲ್ಲವೇ ಹೊರತು ಹಿರಿಯರು ಮಾಡದೆ ಇದ್ದುದ್ದರಿಂದ ಬಿಟ್ಟಿರುತ್ತೇವೆಂದು ಹೇಳುವುದಲ್ಲ. ಇಂತಹ ಪರಮಪವಿತ್ರವಾದ ಹೋಸ ವ್ರತನ್ನು ಮಾಡಿ ಉತ್ತಮ ಗತಿಯನ್ನು ಪಡೆದ ಚಾಂಡಾಲ ಸ್ತ್ರೀಯ ಕಥೆಯು ಒಂದು ಹಳೆಯ ಪುಸ್ತಕವು ( ಕೈಬರಹದ್ದು ) ಸಿಕ್ಕಿದ್ದರಿಂದ ಅದರಲ್ಲಿರುವ ಪದ್ಯಗಳ ಕಥಾಸಾರಾಂಶವನ್ನು ಸಂಕ್ಷಿಪ್ತವಾಗಿ ಗದ್ಯರೂಪದಲ್ಲಿ ಬರೆದು ಅದೇ ಪದ್ಯಗಳನ್ನು ಈ ಪುಸ್ತಕದ ಮತ್ತೊಂದೆಡೆಯಲ್ಲಿ ಕೊಟ್ಟಿರುತ್ತದೆ. ಈ ಚಿಕ್ಕ ಕಥೆಯನ್ನು ಆದರಪೂರ್ವಕದಿಂದ ಓದಿದ ಪ್ರತಿಯೊಬ್ಬ ಬಾಂಧವನೂ ಹೋಸ ವ್ರತವನ್ನು ಪರಿಪಾಲಿಸಿ ಉತ್ತಮ ಗತಿ ಪಡೆಯುವನೆಂದು ನನ್ನ ಧೃಡವಾದ ನಂಬಿಕೆ.

ಈ ಚಿಕ್ಕ ಪುಸ್ತಕದಲ್ಲಿರುವ ಕಥೆಗೆ ನಾಗಸ್ತ್ರೀಯೇ ಮುಖ್ಯ ಕಥಾನಾಯಕಿಯಾಗಿರುವುದರಿಂದ ಈ ಪುಸ್ತಕಕ್ಕೆ ನಾಗಸ್ತ್ರೀ ಎಂಬ ಅಭಿದಾನವನ್ನಿಟ್ಟಿರುತ್ತದೆ.

ಇದನ್ನು ಬರೆಯಲು ಅನುಜ್ಞೆಯನ್ನಿತ್ತ ನನ್ನ ಜನ್ಮದಾತರೂ, ಮುರಡಿಯ ಶ್ರೀ ಪಾರ್ಶ್ವನಾಥಸ್ವಾಮಿ ಬಸ್ತಿ ಎಜೆಂಟರೂ ಸಧ್ಯದಲ್ಲಿ ಐಲಕ ದೀಕ್ಷಾಬದ್ಧರೂ ಆದ ಶ್ರೀಮಾನ್ ಡಿ. ಕೆ. ಜೀನದಾಸ್ ಇವರಿಗೆ ಚಿರಕಾಲ ಋಣಿಯಾಗಿರುವೆನು.

ಇದನ್ನು ಬರೆಯಲುಬೇಕಾದ ಉತ್ತೇಜನವನ್ನು ಕೊಟ್ಟು ಪ್ರೋತ್ಸಾಹಿಸಿದ ಶ್ರೀಮಾನ್ ನಾಗಪ್ಪ ರಾಯಪ್ಪ ಚಿವಟೆಯವರಿಗೂ, ಚಂದ್ರನಾಥ ಸಂಗೀತ ಸಮಾಜದ ಅಧ್ಯಾಪಕರಾದ ಶ್ರೀಮಾನ್ ಎಂ, ಎನ್, ಕಸ್ತೂರಿ ಬೀಳಿಗಿಕರ್ ಇವರಿಗೂ ಅಲ್ಲದೆ ಪ್ರಕಟನಾ ಕಾರ್ಯದ ಭಾರವನ್ನು ವಹಿಸಿ ಪ್ರಚುರುಪಡಿಸಿದ ಶ್ರೀ. ಚಂದ್ರನಾಥ ಸಂಗೀತ ಸಮಾಜದವರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ.

ಇದು ನನ್ನ ಪ್ರಥಮ ಪ್ರಯತ್ನವಾಗಿರುವುದರಿಂದ ಇದರಲ್ಲನೇಕ ನ್ಯೂನಾತಿರೇಕಗಳಿರಬಹುದು. ವಿದ್ಯಾವಿನಯ ಸಂಪನ್ನರಾದ ವಾಚಕ ಮಹಾಶಯರು ಹಂಸಕ್ಷೀರ ನ್ಯಾಯದಂತೆ ಒಳ್ಳೆಯದನ್ನು ಸ್ವೀಕರಿಸಿ ತಪ್ಪನ್ನು ತಿಳಿಸಿದಲ್ಲಿ ಮುಂದಿನ ಪ್ರಕಟನೆಯಲ್ಲಿ ಸರಿಪಡಿಸಿಕೊಳ್ಳುತ್ತೇನೆ.

ವೀರ ಶಕ ೨೪೬೦ ಆಶ್ವೀಜ<br>ತಾ|| ೧೭-೧೦-೩೪ ಇಸ್ವಿ

ಸಮಾಜಸೇವಕ<br>ಜಿನದತ್ತ ತನಯ ಹುಬ್ಬಳ್ಳಿ.

## ಅಭಿನಂದನ ಪತ್ರಿಕೆ.



ಬಾಂಧವರೆ! ನಮ್ಮ ಜೈನ ಸಮಾಜದ ನಡವಳಿಯಲ್ಲಿರುವ ಅಹೋಶ (ಹೋಸ) ವ್ರತದವಿಷಯದಲ್ಲಿ ದೊರೆತ ಹಳೆಯ ಪದ್ಯಗಳ ತಾತ್ಪರ್ಯನ್ನು ಅಬಾಲವೃದ್ಧರಿಗೂ ಸಹ ತಿಳಿಯುವಂತೆ ಸರಳವೂ, ಸುಲಭವೂ ಅರ್ಥಗರ್ಭಿತವೂ ಆದ ಸಂಕ್ಷಿಪ್ತ ಕಥಾ ಸಾರಾಂಶದೊಡನೆ ಬರೆದು ಪ್ರಕಟಿಸಲು ಶ್ರೀ ಚಂದ್ರನಾಥ ಸಂಗೀತ ಸಮಾಜಕ್ಕೆ ಧರ್ಮವಾತ್ಸಲ್ಯದಿಂದ ಅನುಮತಿಯನ್ನಿತ್ತು ಸಮಾಜಸೇವಾ ದುರಂಧರರಾಗಿ ಸಮಾಜದ ವಿಷಯಗಳಲ್ಲಿ ಅವಿಶ್ರಾಂತರಾಗಿ ಕೆಲಸ ಮಾಡುತ್ತಿರುವ ಶ್ರೀಮಾನ್ ಜಿನದತ್ತ ತನಯ ಇವರಿಗೆ ಈ ಸಮಾಜದವರು ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನರ್ಪಿಸುತ್ತಾರೆ.

## ಚಂದ್ರನಾಥ ಗ್ರಂಥಮಾಲೆಯ ನಿಯಮಾವಳಿಯು

೧ ಈ ಕಾರ್ಯದ ಏರ್ಪಾಡಿಗಾಗಿ ಕೆಳಗೆ ಬರೆದ ೫ ಮಂದಿ ಸಭ್ಯಗೃಹಸ್ಥರನ್ನು ನೇಮಿಸಲ್ಪಟ್ಟಿರುತ್ತದೆ:—

೧ ಮ|| ರಾ|| ನಾಗಪ್ಪ ರಾಯಪ್ಪ ಚಿವಟಿ [ಚೇಅರಮನ್]
೨ ,, ,, ಮಹಾವೀರ ನಾನಪ್ಪ ಕಸ್ತೂರಿ, ಬೀಳಗಿಕರ [ಸೆಕ್ರೆಟರಿ]
೩ ,, ,, ಧರಣೇಂದ್ರಪ್ಪ ಜಿನ್ನಪ್ಪ ದಂಡಾವತಿ
೪ ,, ,, ಶಾಂತಪ್ಪ ರಾಯಪ್ಪ ಬರಿಗಾಲಿ
೫ ,, ,, ಭಾಸ್ಕರಪ್ಪ ಬುಜ್ಜಪ್ಪ ಕಂಚೀಕೇರಿ.

೨ ಈ ಸಭ್ಯಗೃಹಸ್ಥರೊಳಗಿನವನೊಬ್ಬನು ಚೇಅರಮನ್, ಮತ್ತೊಬ್ಬನು ಸೆಕ್ರೆಟರಿ ಇರತಕ್ಕದ್ದು.

೩ ಸಭೆಯ ಕಾಲಕ್ಕೆ ಸಭ್ಯಗೃಹಸ್ಥರು ಮೂರು ಮಂದಿ ಸಭೆಗೆ ಹಾಜರಾದರೆ ಕೋರಮ ಆಯಿತೆಂದು ತಿಳಿಯತಕ್ಕದ್ದು.

೪ ಸಭೆಯವರಲ್ಲಿ ಸಮಾನಮತಗಳಾದಲ್ಲಿ ಚೇಅರಮನ್ನರಿಗೆ ಎರಡು ಮತ ಗಳನ್ನು ಕೊಡುವ ಅಧಿಕಾರವಿರುತ್ತದೆ.

೫ ಸಭ್ಯಗೃಹಸ್ಥರ ಬಹುಮತದಂತೆ ಯೋಗ್ಯ ರೀತಿಯಿಂದ ಕಾರ್ಯವು ನಡಿ ಯತಕ್ಕದ್ದು.

೬ ಯಾವನಾದರೊಬ್ಬ ಮೆಂಬರನು ಈ ಸಭೆಯ ಕೆಲಸ ಮಾಡಲಿಕ್ಕೆ ಖುಷಿ ಯಿಲ್ಲದವನಾಗಲಿ, ಅಪಾತ್ರನಾಗಲಿ ಆದರೆ ಉಳಿದಂಥ ಮೆಂಬರ ಜನರು ಅವನಸ್ಥಾನದಲ್ಲಿ ಬೇರೊಬ್ಬ ಜೈನ ಸಭ್ಯಗ್ರಹಸ್ಥನನ್ನು ನೇಮಕ ಮಾಡ ಬೇಕು.

೭ ಈ ಗ್ರಂಥಮಾಲೆಗೆ ಮತ್ಯಾರಾದರೂ ದ್ರವ್ಯಸಹಾಯ ಮಾಡಿದರೆ ಅದ ನ್ನು ಸಭ್ಯಗ್ರಹಸ್ಥರು ಸ್ವೀಕಾರ ಮಾಡಿಕೊಳ್ಳಬಹುದು. ಈ ಗ್ರಂಥ ಮಾಲೆ ಯ ಹೆಸರನ್ನು ಮಾತ್ರ ಯಾವಕಾರಣದಿಂದಲೂ ಬದಲಾಯಿಸಕೂಡದು.

೮ ಗ್ರಂಥಮಾಲೆಯ ಗ್ರಂಥವು ಪ್ರಸಿದ್ಧವಾದ ಕೂಡಲೆ ಅದನ್ನು ಮಾರಾಟ ಮಾಡಿ ಬಂದ ಹಣವನ್ನು ಸಮಾಜದ ಫಂಡಿನೊಳಗೆ ಕೂಡಿಸಿಟ್ಟು ಮುಂ ದಾದರೂ ಕನ್ನಡ ಜೈನ ಗ್ರಂಥಪ್ರಕಾಶನದ ಕೆಲಸವನ್ನು ನಡಿಸಬೇಕು.

೯ ಈ ಗ್ರಂಥಮಾಲೆಯ ಸಂಬಂಧದ ಹೊಸನಿಯಮಗಳನ್ನು ಮಾಡುವ ಅಧಿಕಾರವೂ ಅಥವಾ ಇದ್ದ ನಿಯಮಗಳನ್ನು ಬದಲುಮಾಡುವ ಅಧಿಕಾ ರವೂ ಈ ೫ ಜನ ಸಭ್ಯಗೃಹಸ್ಥರಿಗೆ ಇರುತ್ತದೆ.

---

# ಕಥಾಸಾರಾಂಶ

ಭರತ ಕ್ಷೇತ್ರದಲ್ಲಿ ಚಿತ್ರಕೂಟವೆಂಬ ಪಟ್ಟಣವಿದ್ದಿತು. ಅದನ್ನು ಧಾರ್ಮಿಕನೂ ವಿಚಾರಶೀಲನೂ ಪರಾಕ್ರಮಿಯೂ, ದಯಾಳುವೂ ಆದ ಶ್ರೀಪತಿ ಎಂಬ ಮಹಾರಾಜನು ಆಳುತ್ತಿದ್ದನು. ಇಂತಹ ರಾಜನಿಗನುಗುಣವಾದ ಬುದ್ಧಿ ಚಾತುರ್ಯಗಳಿಂದ ಕೂಡಿದ ಶ್ರೀಪಾಲನೆಂಬ ಮಂತ್ರಿಯಿದ್ದನು. ಇವನಿಗೆ ಸಮ್ಯಗ್ದೃಷ್ಟಿಯೂ ವಿಚಾರಪರಳೂ, ಪತಿ ಭಕ್ತಿ ಪಾರಾಯಣಳೂ ಆದ ಧನವತಿ ಎಂಬ ಪತ್ನಿಯಿದ್ದಳು. ಈ ದಂಪತಿಗಳ ಧರ್ಮ ಪ್ರಭಾವನೆಯ ಕುರುಹೋ ಎಂಬಂತೆ ಪೂರ್ಣ ಚಂದ್ರನೋಪಾದಿಯಲ್ಲಿರುವ ಓರ್ವ ಪುತ್ರನಿದ್ದನು.

ಒಂದು ದಿವಸ ಸಾಯಂಕಾಲಕ್ಕೆ ಒಬ್ಬ ಅನಾಥಳಾದ ಹೊಲತಿಯು ಭಿಕ್ಷೆ ಬೇಡುತ್ತಾ ಧನವತಿಯ ಮನೆಯ ಬಾಗಿಲಿಗೆ ಬಂದಳು. ಆಗ ಸೂರ್ಯನು ಅಸ್ತಮಯನಾಗಿದ್ದುದರಿಂದ ಆಟವಾಡಲು ಹೊರಗೆ ಹೋಗಿದ್ದ ಧನವತಿಯ ಪುತ್ರನು ಮನೆಗೆ ಬಂದು ತನ್ನ ತಾಯಿಯನ್ನು ಊಟಕ್ಕೆ ಇಡಲು ಕೇಳಿದನು. ಅದಕ್ಕೆ ಅವಳು:– ''ಕತ್ತಲೆಯಾದನಂತರ ಊಟ ಮಾಡಬಾರದು, ಸಂಸಾರ ಸಾಗರದಲ್ಲಿ ಅಲೆದಾಡುತ್ತಾ ಅನೇಕ ತಡೆ ಹುಟ್ಟಿ ಸತ್ತು ಬಹಳ ಕಷ್ಟಗಳನ್ನನುಭವಿಸಿ ಏನೋ ಕಿಂಚಿತ್ ಪೂರ್ವ ಪುಣ್ಯದ ಬಲದಿಂದ ಹೋಸವ್ರತವನ್ನು ಪಾಲನೆ ಮಾಡುವ ಜೀವದಯಾಪರವಾದ ಜೈನ ಮತದಲ್ಲಿ ಹುಟ್ಟಿರುವುದರಿಂದ ಆ ವ್ರತವನ್ನು ಬಿಡಬಾರದು. ಅಲ್ಲದೆ ಹಿಂಸಿಸುವುದು, ಸುಳ್ಳು ಹೇಳುವದು, ಕಳ್ಳತನ ಮಾಡುವುದು ಅಲ್ಲದೆ ಹೆಂಡ ಮಾಂಸ ಮತ್ತು ಜೇನತುಪ್ಪ ಇವುಗಳನ್ನು ತಿನ್ನುವುದು ಮುಂತಾದವುಗಳನ್ನು ಬಿಡಬೇಕು. ಇಂಥವುಗಳನ್ನು ಬಿಡದೆ ಇದ್ದಲ್ಲಿ ನೀಚ ಕುಲವು, ಬಂಜೆತನ, ಅಂಗಹೀನತೆ, ಕುಷ್ಟರೋಗ, ದಾರಿದ್ರ್ಯ ಮುಂತಾದ ಸಹಿಸಲಶಕ್ಯವಾದ ಕಷ್ಟಗಳನ್ನನುಭವಿಸಬೇಕಾಗುತ್ತದೆ" ಎಂದು ಹೇಳುತ್ತಿದ್ದ ಬುದ್ಧಿವಾದದ ಮಾತುಗಳನ್ನು ಬಾಗಿಲಿನಲ್ಲಿ ನಿಂತಿದ್ದ

ಹೊಲತಿಯು ಕೇಳಿದವಳಾಗಿ ಭಿಕ್ಷೆ ನೀಡಲು ಹೊರಗೆ ಬಂದ ಧನವತಿಯ ನ್ನು ಕುರಿತುತನಗೂ ಹೋಸ ವ್ರತದ ವಿಷಯವನ್ನು ಹೇಳಬೇಕೆಂದು ಬೇಡಿಕೊಂಡಳು. ಅದಕ್ಕೆ ಧನವತಿಯು—

"ಹಗಲಿನಲ್ಲಿ ಸುಳಿದಾಡದೆ ಇರತಕ್ಕಂಥ ಸೂಕ್ಷ್ಮ ಜಂತುಗಳು ರಾತ್ರಿಯ ಕಾಲದಲ್ಲಿ ಹುಟ್ಟುವುದರಿಂದ ಅಂತಹ ಪ್ರಾಣಿಗಳಿಗೆ ಅಡಿಗೆ ಮಾಡುವುದರಿಂದ ತ್ರಾಸಾಗುವುದಲ್ಲದೆ ಎಷ್ಟೋ ಪ್ರಾಣಿಗಳು ಸಾಯುವುವೆಂದೂ ಕೆಲವು ಸಮಯಗಳಲ್ಲಿ ರೋಗೋತ್ಪಾದಕ ಕ್ರಿಮಿಗಳು ರಾತ್ರಿ ತೆಗೆದುಕೊಳ್ಳುವ ಆಹಾರದೊಡನೆ ಹೊಟ್ಟೆಯಲ್ಲಿ ಸೇರಿ ಅನೇಕ ರೋಗಗಳಿಗೆ ಕಾರಣವಾಗುವುದರಿಂದಲೂ, ಸೂರ್ಯಾಸ್ತಮಯವಾದನಂತರ ಅನ್ನ, ಪಾನ, ಖಾದ್ಯ, ಲೇಹ್ಯ ಪಧಾರ್ಥಗಳನ್ನು ಮನ ವಚನ ಕಾಯಗಳಿಂದ ತಿನ್ನುವುದನ್ನು ಬಿಡುವುದೇ ಹೋಸ ವ್ರತವೆಂದೂ, ಈ ವ್ರತವನ್ನು ಪಾಲನೆ ಮಾಡಿದರೆ ದೇವಲೋಕವೂ, ಸ್ಫುರದ್ರೂಪವೂ, ಸಕಲ ಐಶ್ವರ್ಯಗಳೂ, ದೊಡ್ಡಮನೆತನವೂ, ದೇಶಾಧಿಪತಿತ್ವವೂ, ಲಭಿಸುವುವಲ್ಲದೆ ಜನನ ಮರಣ ರಹಿತವಾದ ಮೋಕ್ಷವು ಲಭಿಸುವುದೆಂದೂ ಹೇಳಿದ ಧನವತಿಯ ಮಾತಿನಲ್ಲಿ ನಂಬಿಗೆಯನ್ನಿಟ್ಟು ಆ ಚಾಂಡಾಲಿಯು ಅಂದಿನಿಂದ ತನಗೆ ಹೋಸವ್ರತವಿರಲೆಂದು ವ್ರತ ಧಾರಣಮಾಡಿ ತನ್ನ ಮನೆಯನ್ನು ಸೇರಿದಳು.

ಕೆಲವು ದಿವಸಗಳು ಕಳೆದ ನಂತರ ಒಂದು ದಿವಸ ರಾತ್ರಿ ಹೊಲತಿಯ ಗಂಡನಾದ ಭೀಮನು ಊಟಮಾಡುತ್ತಾ ಹೆಂಡತಿಯನ್ನು ತನ್ನೊಡನೆ ಊಟ ಮಾಡಲು ಕರೆದನು. ಅದಕ್ಕೆ ಅವಳು ತಾನು ವ್ರತವನ್ನು ಪಾಲಿಸುತ್ತಿ

ರುವದರಿಂದ ರಾತ್ರಿ ಊಟಪಡುವುದಿಲ್ಲವೆಂದಳು. ತನ್ನ ಮಾತಿಗೆ ಪ್ರತ್ಯುತ್ತರವನ್ನು ಹೇಳಿದಳೆಂದು ಕುಪಿತನಾಗಿ ಬಲಾತ್ಕಾರಮಾಡಿದನು. ಅದಕ್ಕೂ ಅವಳು ಬಾರದೆ ಇರಲು ಅವಳ ಮುಂದಲೆಯನ್ನು ಹಿಡಿದೆಳೆದು ತನ್ನ ಸಮೀಪದಲ್ಲಿದ್ದ ಮಚ್ಚು (ಭರ್ಜಿ)ಯಿಂದಅವಳನ್ನು ಇರಿದು ಕೊಂದನು. ಪಾಪಿಗೇತರ ಅಂತಃಕರುಣ!

ಈ ಕೃತ್ಯವು ಧನವತಿಗೆ ಗೊತ್ತಾಗದಿರಲಿಲ್ಲ. ಅವಳು ಚಾಂಡಾಲನ ಘೋರ ಕೃತ್ಯಕ್ಕೆ ಮನನೊಂದವಳಾಗಿ ಅವನನ್ನು ಕರೆಯಿಸಿ ಹೆಂಡತಿಯನ್ನು ಹಟಾತ್ತಾಗಿ ಕೊಂದದ್ದು ಒಳ್ಳೆಯದಲ್ಲವೆಂದೂ ಅದರಿಂದ ನಿನಗೆ ಕೇಡಾಗುವದೆಂದೂ ಇನ್ನು ಮೇಲಾದರೂ ಇಂತಹ ಪಾಪ ರಾಕ್ಷಸೀಕೃತ್ಯವನ್ನು ಮಾಡಬಾರದೆಂದೂ ಚನ್ನಾಗಿ ತಿಳಿಹೇಳಲು ಅವನು ತನ್ನ ಮನೆಗೆ ಬಂದು ತನ್ನ ಪಾಪಕೃತ್ಯಕ್ಕೆ ಮರುಗಿದವನಾಗಿ ಅನ್ಯಾಯವಾಗಿ ಹೆಂಡತಿಯನ್ನು ಕೊಂದೆನಲ್ಲಾ ಎಂಬ ಸಂತಾಪದಿಂದ ಆತ್ಮಹತ್ಯ ಮಾಡಿಕೊಂಡನು. ರಾಕ್ಷಸೀಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವಾಗದೇ ಬಿಡಲಿಕ್ಕಿಲ್ಲವಲ್ಲವೇ?

---

ಇತ್ತ ಧನವತಿಯು ನವಮಾಸ ತುಂಬಿ ಧರ್ಮದ ಸ್ವರೂಪವೇ ಒಂದು ರೂಪವನ್ನು ತಾಳಿಕೊಂಡು ಬಂದಿದೆಯೋ ಎನ್ನುವಂತೆ ಷೋಡಶ ಕಲೆಗಳಿಂದ ತುಂಬಿದ ರೇಖ ಲಾವಣ್ಯಗಳುಳ್ಳ ಸ್ತ್ರೀ ಶಿಸುವನ್ನು ಪ್ರಸವಿಸಿದಳು. ಆ ಶಿಶುವಿಗೆ ನಾಗಸ್ತ್ರೀ ಎಂದು ನಾಮಕರಣ ಮಾಡಿದರು. ನಾಗಸ್ತ್ರೀಯು ತನ ವಿದ್ಯೆ ಬುದ್ಧಿ ಚಾತುರ್ಯಗಳಿಂದ ಸರ್ವಜನ ಮನೋರಂಜನೆಯಾಗಿ ವೃದ್ಧಿ ಚಂದ್ರನಂತೆ ದಿನೇದಿನೇ ಬೆಳೆಯುತ್ತಾ ಬಂದಳು. ಇವಳು ಒಂದಾನೊಂದು ದಿವಸ ತನ್ನ ಮನೆಯ ಮುಂಭಾಗದಲ್ಲಿ ಹಾದು ಹೋಗುತ್ತಿದ್ದ ನಾಯಿಯನ್ನು ನೋಡಿ ಅದು ತನಗೆ ಬೇಕೆಂದು ಹೇಳಿ ಅದನ್ನು ಹಿಡಿತರಿಸಿ ಪ್ರೀತಿಯಿಂದ ಸಾಕುತ್ತಿದ್ದಳು. ಆ ನಾಯಿಯನ್ನು ನಾಗಸ್ತ್ರೀಯು, ನಾಗಸ್ತ್ರೀಯನ್ನು ನಾಯಿಯೂ ಪ್ರೀತಿಸುತ್ತಿದ್ದುದನ್ನು ಕಂಡವರೆಲ್ಲಾ ಇದೇನೋ ಪೂರ್ವಜನ್ಮ ಸಂಸ್ಕಾರವಿರಬೇಕೆಂದು ಅನ್ನುತ್ತಿದ್ದರು.

ವಾಚಕ ಮಹಾಶಯರೇ! ನೀವು ಪೂರ್ವ ಜನ್ಮ ಸಂಸ್ಕಾರವಿರ ಬಹುದೆಂದು ನಂಬುವಿರಾ? ನಂಬುವಿರಾದರೆ ನಿಮ್ಮ ಊಹೆ ಯು ನಿಜವಾದುದೆಂದು ತಿಳಿದು ನಿಮ್ಮ ಮನೋಭಾವನೆಯ ನ್ನು ಮುಂದಕ್ಕೆ ಬಿಡದೆ ಆ ನಾಗಸ್ತ್ರೀಯೇ ಚಾಂಡಾಲಿ ಎಂ ದೂ, ಆ ಶ್ವಾನನವೇ ಚಾಂಡಾಲಿಯ ಪತಿಯಾದ ಭೀಮನೆಂ ದೂ, ಹೇಳಲು ತಮಗೆ ಆಶ್ಚರ್ಯವಾಗಲಿಕ್ಕಿಲ್ಲವೆಂದು ತಿಳಿ ಯುತ್ತೇನೆ.

ಅದೇನಗರದಲ್ಲಿ ಶ್ರೀಧರನೆಂಬ ವರ್ತಕಶಿರೋಮಣಿಯು "ದೇವಪೂ ಜಾ ಗುರುಪಾಸ್ತಿ ಸ್ವಾಧ್ಯಾಯ ಸಂಯಮಸ್ತಪಃ" || ದಾನಂ ಚೇತಿ ಗೃಹಸ್ಥಾನಾಂಷಟ್ಕರ್ಮಾಣಿ ದಿನೇ ದಿನೇ|| ಎಂದು ಹೇಳು ತ್ತಿರುವ ಆಚಾರ್ಯರ ವಚನಾನುಸಾರ ಷಟ್ಕರ್ಮಗಳನ್ನು ಮಾಡುತ್ತಾ ಕಾ ಲವನ್ನು ಕಳೆಯುತ್ತಿದ್ದನು. ಇವನು ದ್ರವ್ಯ ಸಂಪಾದನೆಗೋಸ್ಕರ ಬೇರೆ ಊ ರಿಗೆ ಹೋಗಲುದ್ಯುಕ್ತನಾಗಿ ತಾನು ಪುನಃ ಊರಿಗೆ ಬರುವವರೆಗೂ ಯಾವ ತರಹದ ಕುಂದು ಕೊರತೆಗಳಿಲ್ಲದೆ ದಾನ ಧರ್ಮಗಳನ್ನು ಮಾಡಬೇಕೆಂದು ತನ್ನ ಪತ್ನಿಗೆ ಹೇಳಿ ಸಾಕಷ್ಟು ಹಣವನ್ನು ಕೊಟ್ಟು ಪರದೇಶ ಗಮನ ಮಾಡಿ ದನು.

ಇತ್ತ ಲೋಭಿಯಾದ ಇವನ ಪತ್ನಿಯು ಪತಿಯ ಮಾತಿನಂತೆ ನಡೆ ಯದೆ ದಾನ ಧರ್ಮಗಳನ್ನು ಬಿಟ್ಟು ಬಿಟ್ಟಳು.

ಅತ್ತ ಶ್ರೀಧರನು ತನ್ನ ವ್ಯಾಪಾರವನ್ನು ತೀರಿಸಿಕೊಂಡು ಊರ ಹೆಬ್ಬಾ ಗಿಲಿಗೆ ಬಂದನು. ತನ್ನ ಹೆಂಡತಿಗೆ ತಾನು ಬಂದ ವಿಷಯವನ್ನು ಹೇಳಿಕಳು ಹಿಸಲು ಹೆಂಡತಿಯು ತನ್ನ ಗಂಡನು ವ್ಯಾಪಾರಮಾಡಿ ಬೇಕಾದಷ್ಟು ಹಣವನ್ನು ತಂದಿರುವುದನ್ನು ತಿಳಿದು ಅವನಿಗೆ ಆದರ ಸತ್ಕಾರಮಾಡಲು ಅಣಿ ಮಾಡಿ ಕ

ನ್ನ ಪತಿಯು ಮನೆಗೆ ಬಂದನಂತರ ವಿನಯದಿಂದ ಉಪಚರಿಸಲು, ಇವಳ ಉಪಚಾರವಾವುದೂ ಇವನ ಮನಸ್ಸಿಗೆ ಬಾರದೆ ತಿರಸ್ಕರಿಸಿದನು.

ಹೀಗೆ ತಿರಸ್ಕರಿಸಲು ತನ್ನ ಇಚ್ಛೆಯಂತೆ ದಾನ ಧರ್ಮಗಳನ್ನು ಮಾಡದೇ ಇದ್ದದ್ದೇ ಕಾರಣವೆಂದು ಮತ್ತೆ ಹೇಳಬೇಕಾಗಿಲ್ಲ.

ಪತ್ನಿಗೆ ತನ್ನ ಪತಿಯ ತಿರಸ್ಕಾರವು ಸಹಿಸಲಸದಳವಾಯಿತು. ಆಗ ಅವಳು ತನ್ನ ತವರೂರಿಗೆ ಹೋಗಬೇಕೆಂದು ಕೇಳಲು ಶ್ರೀಧರನು ಅವಳನ್ನು ಊರಿಗೆ ಕಳುಹಿಸಿ ಸಂಸಾರದಲ್ಲಿ ಸುಖವಿಲ್ಲವೆಂದು ತಿಳಿದು ಸನ್ಯಾಸ ವ್ರತವನ್ನು ಸ್ವೀಕರಿಸಬೇಕೆಂದು ಜಿನ ಚೈತ್ಯಾಲಯವನ್ನು ಸೇರಿ ಮೂರುಲೋಕಗಳಿಗೊಡೆಯನೂ, ಜಗತ್ ರಕ್ಷಕನೂ, ಆದ ಶ್ರೀ ಭಗವಂತನ ದರ್ಶನವನ್ನು ತೆಗೆದು ಕೊಂಡು ಅಷ್ಟ ವಿಧಾರ್ಚನೆಗಳಿಂದ ಪೂಜಿಸಿ ಸಮೀಪದಲ್ಲಿದ್ದ ಸ್ಯಾದ್ವಾದ ಪಾರಂಗತರಾದ **ಶ್ರೀಬೋಧಸಾಗರ** ಮುನಿಗಳ ಹತ್ತಿರಕ್ಕೆ ಹೋಗಿ ಅವರಿಗೆ ನಮಸ್ಕರಿಸಿ ಅಹಿಂಸಾತತ್ವಮೂಲವಾದ ಧರ್ಮೋಪದೇಶವನ್ನು ಕೇಳಿ ತನ್ನ ಮನದ ಅಭಿಪ್ರಾಯವನ್ನು ಅರಿಕೆ ಮಾಡಿಕೊಂಡನು. ವಿದ್ಯಾವಿನಯಸಂಪನ್ನನೂ ಮನ್ಮಥನನ್ನು ಜರಿಯುವ ರೂಪ-ಲಾವಣ್ಯಗಳುಳ್ಳವನೂ ತಾರುಣ್ಯವನ್ನೂ ಧನವನ್ನೂ ಹೊಂದಿರುವನಾಗಿ ಸತ್ಪುರುಷನಾಗಿರುವದರಿಂದ ಇವನಿಂದ ಎಷ್ಟೋ ಧರ್ಮಕಾರ್ಯಗಳು ನಡೆಯಬೇಕಾಗಿರುವದರಿಂದ ಶ್ರಾವಕ ಧರ್ಮದಲ್ಲಿಯೇ ಕೆಲವು ದಿವಸಗಳಿರಬೇಕೆಂದು ತಿಳಿದು ಅವನಿಗೆ ಮುನಿದೀಕ್ಷೆಯನ್ನು ಕೊಡಲಿಲ್ಲ.

ಇದನ್ನು ಅಲ್ಲಿ ನೆರೆದಿದ್ದ ಸಮಸ್ತ ಶ್ರಾವಕ ಮಂಡಳಿಯವರು ನಡೆದ ವೃತ್ತಾಂತವನ್ನು ತಿಳಿದವರಾಗಿ ಅನುರೂಪಳೂ ಧಾರ್ಮಿಕಳೂ ಸಮ್ಯಕ್ತ್ವವತಿಯೂ ಆದ ಕನ್ಯೆಯನ್ನು ತಂದು ಲಗ್ನ ಮಾಡುವೆವೆಂದು ಶಪಥ ಮಾಡಿ ಶ್ರೀಧರನನ್ನು ಸಂತೈಸುತ್ತಿರುವಲ್ಲಿ ನವಯೌವನವತಿಯಾದ ಕನ್ಯೆಯು ತನ್ನ ತಾಯಿಯೊಡಗೂಡಿ ಸಮಸ್ತ ಪರಿವಾರದೊಂದಿಗೆ ದೇವಸ್ಥಾನಕ್ಕೆ
ಶ್ರೀ ಜಿನೇಶ್ವರನನ್ನು ಜಲ, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲಾರ್ಘ್ಯಗಳಿಂದ ಪೂಜಿಸಿ ದಿನವ್ರತವನ್ನು ಸ್ವೀಕರಿಸಿ ಮುನಿಗಳ ಸಮೀ

ಪಕ್ಕೆ ಬಂದು ಸಂಸಾರಭ್ರಮಣರೂಪವನ್ನು ಕಳೆದುಕೊಳ್ಳಲು ಮಾಡಬೇಕಾದ ಕರ್ತವ್ಯವನ್ನು ತಿಳಿದು, ಶಾಸ್ತ್ರವನ್ನು ಕೇಳಿ, ಗುರುಗಳಿಗೆ ವಂದಿಸಿ ಹೊರಡುವ ಸಮಯದಲ್ಲಿ ಆ ಸ್ತ್ರೀಯ ಚಂಚಲ ದೃಷ್ಟಿಯು ಮನಸಿಜನೋಪಾದಿಯಲ್ಲಿದ್ದ ಶ್ರೀಧರನ ಮೇಲೆ ಬಿದ್ದಿತು. ಶ್ರೀಧರನ ಕೇಕರದೃಷ್ಟಿಯು ಈ ಕನ್ಯೆಯ ಮೇಲೆ ಬಿದ್ದು ಮನಸೋತವನಾಗಿ ಅವಳನ್ನೇ ವಿವಾಹವಾಗಬೇಕೆಂಬ ಮನಸ್ಸಿನಿಂದ ಮನೆಯನ್ನು ಸೇರಿದನು

ವಾಚಕ ಮಹಾಶಯರೇ ಈ ಕನ್ಯೆಯು ಯಾರೆಂದು ಊಹಿಸಬಲ್ಲಿರಾ? ಇವಳೇ ಧನವತಿಯ ಸುಕುಮಾರಿಯಾದ ನಾಗಸ್ತ್ರೀ. ಇವಳು ತನ್ನ ತಾಯಿಯೊಡಗೂಡಿ ದೇವಸ್ಥಾನಕ್ಕೆ ಬಂದ ಸಮಯದಲ್ಲಿ ಮೇಲೆ ನಡೆದ ವಿಷಯಗಳು ನಡೆದುವು.

ಇತ್ತ ನಾಗಸ್ತ್ರೀಯು ಶ್ರೀಧರನನ್ನೇ ವಿವಾಹವಾಗಬೇಕೆಂದು ಮನಸ್ಸು ಮಾಡಿದಳು. ಈ ವಿಷಯವು ಧನವತಿಗೂ, ಶ್ರೀಪತಿಗೂ ತಿಳಿದದ್ದರಿಂದಲೂ ಶ್ರೀಧರನಿಗೆ ನಾಗಸ್ತ್ರೀಯ ಹೊರತು ಬೇರೆ ಅನುರೂಪಳಾದ ಕನ್ಯೆ ಇಲ್ಲವೆಂದು ಅವನ ವಂಶಜರು ಚಿಂತಿಸುತ್ತಿರುವಲ್ಲಿ ನಾಗಸ್ತ್ರೀಯ ಮನೋಭಿಲಾಷೆಯು ಗೊತ್ತಾದ್ದರಿಂದಲೂ ಶುಭಮುಹೂರ್ತದಲ್ಲಿ ನಾಗಸ್ತ್ರೀಯ ಮತ್ತು ಶ್ರೀಧರನ ವಿವಾಹವು ಬಹು ವಿಜೃಂಭಣೆಯಿಂದ ನಡೆಯಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಶ್ರೀಧರನು ಮತ್ತೊಂದು ಲಗ್ನವಾದದ್ದನ್ನು ಮೊದಲನೆ ಪತ್ನಿಯು ತಿಳಿದವಳಾಗಿ ಮನನೊಂದು ತನ್ನ ತವರೂರಿನಿಂದ ಪತಿಯ ಮನೆಗೆ ಬಂದಳು. ಆಗ ಶ್ರೀಧರನು ತನ್ನ ಮಾತಿನ ಪ್ರಕಾರ ನಡೆಯದ ಕಾರಣ ಅವಳ ದರ್ಶನವೇ ತನಗೆ ಬೇಡವೆಂದು ಹೇಳಿದನು. ಆದರೆ ವಿನಯಸಂಪನ್ನಳಾದ ನಾಗಸ್ತ್ರೀಯು ತನ್ನ ಅಕ್ಕನನ್ನು ಸವತಿ ಮತ್ಸರದಿಂದ ಕಾಣದೆ ಅವಳಿಗೂ ಸ[illegible]ದು ಮನೆಯನ್ನು ಕೊಟ್ಟು ತನ್ನ ಸಮೀಪದಲ್ಲೇ ಇಟ್ಟುಕೊಳ್ಳಬೇಕೆಂದು ತನ್ನ ಪತಿಯನ್ನು ಬೇಡಿಕೊಂಡಳು. ಇವಳ ಮಾತಿನಂತೆ ಶ್ರೀಧರನು ತನ್ನ ಮೊದಲನೆ ಹೆಂಡತಿಗೆ ಮನೆಯನ್ನು ಕೊಟ್ಟನು.

ಅವಳು ಪ್ರತಿದಿವಸವೂ ನಾಗಸ್ತ್ರೀಯು ಮನೆಗೆ ಬರುತ್ತಲೂ ಕೆಲಸ ಕಾರ್ಯಗಳನ್ನು ಮಾಡುತ್ತ ತಂಗಿಯೊಡನೆ ಪ್ರೇಮದಿಂದಿದ್ದಳು,

ಕೆಲವು ದಿವಸಗಳನಂತರ ಶ್ರೀಧರನು ಯಥಾಪ್ರಕಾರ ವ್ಯಾಪಾರಕ್ಕಾಗಿ ಹಡಗವನ್ನು ಏರಿ ಪರದೇಶಗಮನ ಮಾಡಿದನು. ಇತ್ತ ನಾಗಸ್ತ್ರೀಯು ಪತಿಯ ಆಜ್ಞೆಯನ್ನು ಎಳ್ಳಷ್ಟು ಮೀರದೆ ಅವನಿದ್ದಕಾಲದಲ್ಲಿ ಮಾಡುವುದಕ್ಕಿಂತಲೂ ಇಮ್ಮಡಿಯಾಗಿ ದಾನಧರ್ಮ ಪರೋಪಕಾರಗಳನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದಳು. ಒಂದು ದಿವಸ ಇವಳ ಮನೆಗೆ ಶ್ರೀ ಶೃತಸಾಗರರೆಂಬ ಮುನಿಗಳು ೫೦೦ ಜನ ಶಿಷ್ಯರೊಂದಿಗೆ ಭಿಕ್ಷಕ್ಕೆ ಬಂದರು. ಆಗ ನಾಗಸ್ತ್ರೀಯು ಸಂತೋಷಭರಿತಳಾಗಿ ಧರ್ಮವಾತ್ಸಲ್ಯದಿಂದ ಬಂದವರಿಗೆಲ್ಲಾ ಆಹಾರದಾನ ಮಾಡಿ ಪುಣ್ಯಭಾಗಿಯಾದಳು. ಈ ಸಂಭ್ರಮದಲ್ಲಿ ತನ್ನ ಅಕ್ಕನಿಗೆ ಹೇಳಿಕಳುಹಿಸುವದನ್ನು ಮರೆತಳು. ಇವಳ ಇಂಗಿತವನ್ನರಿತ ನಾಯಿಯು ತೀವ್ರದಲ್ಲಿ ಹೋಗಿ ಇವಳ ಅಕ್ಕನ ಮನೆಯ ಮುಂದೆ ಬೊಗಳಿತು. ಇದನ್ನು ಕಂಡು ಸವತಿ ಮಾತ್ಸರ್ಯದಿಂದ ಕೂಡಿದ ಶ್ರೀಧರನ ಪಟ್ಟಮಹಿಷಿಯು ತನ್ನ ಬಾಳು ನಾಯಿಯಿಂದ ಕರೆಯಿಸಿಕೊಳ್ಳುವಂತಾಯಿತೆಂಬ ಸಂತಾಪದಿಂದ ಕ್ರೋಧವಶಳಾಗಿ ತಾನು ಒಲೆಯ ಮೇಲೆ ಕರಿಯಲು ಇಟ್ಟಿದ್ದ ಕಾದೆಣ್ಣೆಯನ್ನು ತಂದು ಆ ನಾಯಿಯ ಮೇಲೆ ಸುರಿದಳು. ಆ ಎಣ್ಣೆಯು ಬಹಳ ಕಾದಿದ್ದುದರಿಂದ ನಾಯಿಯ ಮೈಯಲ್ಲಾ ಸುಟ್ಟಿತು. ನಾಯಿಯು ಅರಚುತ್ತಾ ಕಂಠಗತ ಪ್ರಾಣದಿಂದ ತನ್ನ ಒಡತಿಯ ಮನೆಯ ಬಾಗಿಲಿಗೆ ಹೋಗಿ ಬಿದ್ದಿತು. ಇದನ್ನು ಕಂಡಾನಾಗಸ್ತ್ರೀಯು ತನ್ನ ಅಕ್ಕನ ಕೃತ್ಯಕ್ಕೆ ಮನಕರಗಿದವಳಾಗಿ ಆ ಶುನಕಕ್ಕೆ ಅಂತ್ಯಕಾಲದಲ್ಲಿ ಶೈತ್ಯೋಪಚಾರವನ್ನು ಮಾಡಲು ಕಾಲವಿಲ್ಲವೆಂದು ತಿಳಿದು ಆ ನಾಯಿಯ ಕಿವಿಯಲ್ಲಿ ಪಂಚನಮಸ್ಕಾರವನ್ನು ಉಪದೇಶ ಮಾಡಿದಳು. ಆ ನಾಯಿಯು ಒಂದೇ ಮನಸ್ಸಿನಿಂದ ಪಂಚನಮಸ್ಕಾರವನ್ನು ಕೇಳುತ್ತಾ ದೇಹವನ್ನು ಬಿಟ್ಟಿತು.

ಇತ್ತ ಶ್ರೀಧರನು ತನ್ನ ವ್ಯಾಪಾರವನ್ನು ತೀರಿಸಿಕೊಂಡು ಬೇಕಾದಷ್ಟು ಹಣದೊಂದಿಗೆ ತನ್ನ ಊರಿಗೆ ಹಡಗವನ್ನೇರಿ ಬರುತ್ತಿರಲು ದಾರಿಯಲ್ಲಿ ಅಕಸ್ಮಿಕವಾಗಿ ಒದಗಿದ ಮಳೆ, ಗುಡುಗು, ಮಿಂಚು, ಬಿರುಗಾಳಿಗಳಿಗೆ ಸಿಕ್ಕು ಸಮುದ್ರದ ಅಲೆಗಳ ಹೊಡತಕ್ಕೆ ತನ್ನ ಹಡಗು ಸಿಕ್ಕು ಅಲ್ಲೋಲಕಲ್ಲೋಲವಾಗುವದೆಂದು ತಿಳಿದು ಇಂತಹ ಸಂಕಟಸಮಯದಲ್ಲಿ ಶ್ರೀ ಅರ್ಹತ್ಪರಮೇಶ್ವರನ ಹೊರತು ತನಗೆ ರಕ್ಷಕರು ಬೇರೆಯಿಲ್ಲವೆಂದು ತಿಳಿದು ಪಂಚನಮಸ್ಕಾರವನ್ನು ಜಪಿಸಹತ್ತಿದನು. ಈ ವಿಷಯವು ಆಸನಕಂಪನದಿಂದ ಒಬ್ಬ ದೇವನಿಗೆ ತಿಳಿಯಿತು. ತಕ್ಷಣದಲ್ಲಿಯೇ ದೇವನು ಆಸ್ಥಳಕ್ಕೆ ಬಂದು ಶ್ರೀಧರನಿಗೆ ಉಂಟಾದ ಸಂಕಟವನ್ನು ತಪ್ಪಿಸಿ ಅವನಿಗೆ ನಮಸ್ಕರಿಸಿ ಇದೊಂದು ರತ್ನಾಹಾರವನ್ನು ನಾಗಸ್ತ್ರೀಗೆ ಕೊಡಬೇಕೆಂದು ಬೇಡಿಕೊಂಡನು. ಆಗ ಶ್ರೀಧರನು ಚಕಿತನಾಗಿ “ನೀನು ಯಾರು? ಈರತ್ನಾಹಾರವನ್ನು ನಾಗಸ್ತ್ರೀಗೇಕೆ ಕೊಡಬೇಕು”? ಎಂಬುದಾಗಿ ಕೇಳಿದನು. ಅದಕ್ಕೆ ದೇವನು “ನಿನ್ನ ಮನೆಯ ಬಾಗಿಲಲ್ಲಿ ಬಿದ್ದಿದ್ದ ನಾಯಿಯೇ ನಾನೆಂದೂ, ಪಂಚನಮಸ್ಕಾರದ ಮಹತ್ತಿನಿಂದ ಈ ಜನ್ಮವು ಬಂದಿತೆಂದೂ, ನಿನ್ನ ಹಿರಿಯ ಹೆಂಡತಿಯ ಕೃತಿಯಿಂದ ನಿನಗೆ ವಿಪತ್ತು ಬಂದಿತೆಂದೂ ಆ ವಿಪತ್ತನ್ನು ದೂರ ಮಾಡುವದು ನಿನ್ನ ಕಿರಿಯ ಹೆಂಡತಿಯ ಧರ್ಮ ಪ್ರಭಾವನೆಯಿಂದ ನಾಯಿಯ ಜನ್ಮವನ್ನು ಅಳಿದು ದೇವಜನ್ಮವನ್ನು ತಾಳಿದ ನನ್ನ ಕರ್ತವ್ಯವಾಗಿದ್ದುದರಿಂದ ಬಂದೆನು”. ಎಂದು ಹೇಳಿ ರತ್ನಾಹಾರವನ್ನು ಕೊಟ್ಟನು. ಈ ವೃತ್ತಾಂತವನ್ನೆಲ್ಲ ಶ್ರೀಧರನು ಕೇಳಿ ನಾಗಸ್ತ್ರೀಯ ಅಸ್ಖಲಿತವಾದ ಧರ್ಮ

ಹೇಳುತ್ತಾ, ತನ್ನ ಮೂರುಭವದ ವೃತ್ತಾಂತವನ್ನು ಹೇಳಿ ಶ್ರೀಧರನಿಗೂ ನಾಗ ಸ್ತ್ರೀಗೂ ಆಶೀರ್ವದಿಸಿ ಅದೃಶ್ಯನಾದನು.

ಮಹಾಶಯರೆ! ಸಮ್ಯಕ್ತ್ವವಂತರು ಎಷ್ಟು ಕಷ್ಟಗಳು ಬಂದರೂ ಸಾರಾಗಿ ಪುಣ್ಯಜೀವಿಗಳಾಗಿ ಉದ್ಭವಿಸಿ ವರ್ಣನಾತೀತವಾದ ಸುಖಸಂಪತ್ತುಗಳನ್ನು ಪಡೆಯುವರೆಂಬುದಕ್ಕೆ ಈ ಕಥೆಯೇ ನಿದರ್ಶನವಾಗಿರುತ್ತದೆ. ಇದರಂತೆಯೇ ಸರ್ವರೂ ಸಮ್ಯಕ್ತ್ವವಂತರಾಗಿ ಅಹಿಂಸಾಧರ್ಮವನ್ನು ಪರಿಪಾಲಿಸಿದರೆ ಅಶದೃಶವಾದ ಕೈವಲ್ಯಾಂಗನೆಯ ಪಾಣಿಗ್ರಹಣ ಮಾಡಲು ಸಂಶಯವಿರುವದಿಲ್ಲವೆಂದೂ, ಈ ಕಥೆಯನ್ನು ಸಾವಧಾನದಿಂದ, ತದೇಕಚಿತ್ತರಾಗಿ ಓದಿ, ಕೇಳಿ ಸರ್ವರಿಗೂ ತಿಳುಹಿ ಧರ್ಮಪ್ರಭಾವನೆಯನ್ನು ಮಾಡುವವರಿಗೆ ಇಹ-ಪರಲೋಕಗಳಲ್ಲಿ ಸುಖಸಂಪತ್ತುಗಳುಂಟಾಗುತ್ತವೆಂದೂ ಹೇಳಿ ಈ ಕಥಾಸಾರಾಂಶವನ್ನು ಸಮಾಪ್ತಗೊಳಿಸುವೆನು.

ಓಂ ಶಾಂತಿಃ!!

---

—:॥ ಶ್ರೀ ವೀತರಾಗಾಯನಮಃ ॥:—

# ಹೋಸದ ಚರಿತ್ರೆ.

ಹೋಸದ ವೃತಗಳ ಲೇಸಾಗಿ ನಡಿಸಲು | ಶಾಸ್ವತಸುಖ ಮುಂದಹುದೂ ॥ಪ॥
ಶ್ರೀಜನ ಮುನಿಗಳ ಪಾದಕಮಲವನು | ಪೂಜೆ ಮಾಡಿ ವಂದಿಸುವೇ ॥
ವ್ರೊಜವಿಡಿದು ವ್ರತ ಹೋಸದ ಕಥೆಯನು | ಸಾಜದಿಂದಿಲ್ಲಿ ಪೇಳುವೆನೂ ॥೧॥

ಆ ಕಥೆ ವೀರನೆ ಬರತ ವಿಷಯ | ವಿಖ್ಯಾತನೆ ಪ್ರಾಣಮಧ್ಯದಲೀ ॥
ಬೇಕಾದ ಶೋಭೆ ಚಿತ್ರಕೂಟ ಪುರಾದೊಳು | ಅನೇಕ ವಸ್ತುಗಳುಂಟಲ್ಲೀ॥೨॥

ಆ ಪುರಕಧಿಪತಿ ಚಾರುನರೇಶ್ವರಾ | ಶ್ರೀಪತಿ ವಿಭವದೊಳಿಹನೂ ॥
ಪಾಪಹರನು ಶ್ರೀ ಆರ್ಹನ ಮತವನು | ನಾಪೊತ್ತು ಕೇಳಿ ನಲಿವನೂ ॥೩॥

ಆತಂಗೆ ಮಂತ್ರಿ ಶ್ರೀಪಾಲ ಸಮ್ಯಗ್ದೃಷ್ಟಿ | ಭೂತದಯಾಹಿತಚರಿತಾ ॥
ನಿತೀಶೀಲದೊಳು ಧನವತಿಯೆಂಬಾಳು | ಆತಂಗೆ ಹೆಂಡತಿಯಾಗೀ ॥ ೪ ॥

ಅಂತಾವರೀರ್ವರು ಸುಖಶೀರಿಯೊಳಗಿರೆ | ಮುಂತೊಂದು ದಿವಸಾರ್ಧದೊಳೂ ॥
ಅಂಬರುಜಾತಿ ಹೊಲೆಯನ ಸತಿಯು ಬಂದಾಗ | ನಿಂತು ಭಿಕ್ಷವ ಬೇಡಿ
ಮುಂದೇ ॥ ೫ ॥

ಕುಳ್ಳಿರು ಮಗಳೆಂದು ವಿನಯಾವನುಡಿಯುತೆ | ಅಲ್ಲಿಗೆ ತಂದುಣಲಿಕ್ಕೀ ॥
ನಲ್ಲೆಮಾತಿನಲಿ ಬೋನವ ಕೊಡುವೆಡೆಯೊಳು | ಮೆಲ್ಲಾನೆರವಿಧರೆಗಿಳಿಯೇ॥೬॥

ಆ ಸಮಯದೊಳು ಧನವತಿ ಪುತ್ರಾನು | ಹೋಸ ತಪ್ಪಿ ಉಣಬೇಡ ॥
ಲೇಸಲ್ಲ ಮಗನುಣಲಾಗದೆಂದೆಂಬೂತ | ಬಾಸಿಯು ಪೇಳುತಲಾಗ ॥ ೭ ॥

ಈ ಸಂಸಾರ ಅನೇಕ ಯೋನೀಯೋಳು | ಕ್ಲೇಶಪಟ್ಟು ಸತ್ತು ಹುಟ್ಟೀ ॥
ಲೇಸೆನಿಸುವ ಜೀವದಯದ ಹೋಸಗಳನ್ನು | ಮಾಸಲಾಗದು ಕೇಳೋ

ಇರುಳೂಟ ಕೊಲೆ ಹುಸಿ ಕಳವು ಹಾದರ ಜೂಜು| ಸುರೆಗಿಣ್ಣ ಮಧುಮದ್ದ
ಮಾಂಸ ||
ಅರಳಿ ಆಲ ಹತ್ತಿ ಬಸರಿಗೋಳಿಯಪಣ್ಣು| ಕರಿಯವ್ರತವಬಿಡೊಮಗನೇ||೯||
ಎಂದ ಮಾತನು ಕೇಳಿ ಚಾಂಡಾಳಿ ನುಡಿದಾಳು| ಸಂದೇಹ ತಿಳಿವಂತೆ ಪೇಳೂ||
ಸಂದೇಹಯಿಲ್ಲದೆ ಪೇಳ್ವಾದುಯನಗೆಂದು| ಇಂದು ಕೈಕೊಂಬೆಹೋಸವನು ||೧೦||
ಚನ್ನಾಗಿ ಹೋಸವ ಮಾಡುವ ಜೈನಾರು । ಅನ್ನ ಪಾನ ಕಜ್ಜಯವಾ ।
ಮನ್ನಿಸಿಬಿಡುವಾದು ರಾತ್ರಿಭೋಜನವ| ಸಂಪನ್ನ ಸಿರಿಯುಬಯಸುವರೂ||೧೧||
ಕೆಟ್ಟ ಕುಲವು ಹೀನಂಗ ದಾರಿದ್ರವು| ಕುಷ್ಟ ರೋಗಿ ಬದಿರಂಗಾ ||
ಹೊಟ್ಟೇಲಿ ಹಡಿಯಾದೆ ನೆಲಮನಿಲ್ಲದೆ| ಬಿಟ್ಟ ಹೋಸದ ಕಷ್ಟಮಗಳೇ ||೧೨||
ಹೋಸವ ಪಾಲಿಸಿ ನಡಿಸಾಲು ಸುರಲೋಕ| ವಾಸಾವನ್ನೈದುಸುದಲ್ಲೀ ||
ಲೇಸೆನಿಸುವ ಯಿಕ್ಷು ಕುಲದಲ್ಲಿ ಪುಟ್ಟೇಸಿ| ದೇಶಾಧಿಪತಿಗಳಾಗುವರೂ ||೧೩||
ಅಲ್ಲಿ ಸುಖವ ನುಂಡು ತಣಿದು ಮ | ತೊಂಮಿಗೆ ನಿಲ್ಲದೆ ಜಿನ ರೂಪ ಧರಿಸಿ ||
ಯಲ್ಲ ಕರ್ಮಂಗಳ ತೊಲಗೀಸಿ ಮುಕ್ತೀಗೆ| ವಲ್ಲಾಭರೆಂದು ಹೇಳುವರು||೧೪||
ಕ್ಷಿತಿಯೋಳು ವಿಖ್ಯಾತ ಹೋಸದ ವ್ರತವನು| ಮತಿಯುತೆ ತಿಳಿಯ ಪೇಳಿದಳೂ||
ವ್ರತ ಹೋಸ ನಂಬುಗೆ ಯನಗೀದಾಯಿತುಯೆಂದು ಪತಿ ಯಿದ್ದೆಡೆಗೆ ಐದಿ
ದಳೂ || ೧೫ ||
ಬಂದಾಗಲಿಕ್ಕಿ ಗಂಡನ ಮುಂದೆಯಿರಿ ಸಾಲು| ಯಂದನಿ ವುಣುಬಾರೆ ಎನಲೂ||
ಯಿಂದು ಹೋಸದ ವ್ರತವನು ಕೊಂಡೆ| ನೆಂ ನಾಲು ಸಂದೇಶವನು ಮಾಡು
ಬ್ಯಾಡಾ || ೧೬ ||
ಯಿಂದು ವಲ್ಲದಿರೆ ಸಂದೇಹ ಸಂದಿಸಿ| ಮುಂದಾನು ವಿಷನೆಂದು ನೊಂಕೀ ||
ಮುಂದೇತಿ ಹಿಡಿದೆಳೆದನು ವಲ್ಲೆ| ನೆಂದಾರೆ ಕೊಂದ ನಲಿಗಿಂದವಳಾ || ೧೭ ||
ಆ ಚಾಂಡಾಳೀಯ ಹೋಸದ ವ್ರತವನು| ಭೂ ಚಕ್ರಜನವೆಲ್ಲಾ ಹೊಗಳಿ||
ನೀಚತ್ವ ತೊಲಗೀತು ಧನವತಿ ಉದರಕ್ಕೆ | ತೂಚನೆದೋರೆ ಜನಿಸಿ
ಪಳೂ || ೧೮

ಕೇಳುತ ಧನವತಿ ಕಡುನೊಂದು ಹೊಲೆಯಾಗೆ ತಿಳುಹಿ ಪೇಳಿದಳಾ ನುಡಿಯಾ।
ಮಳಿದೋರು ವೈರಾಗ್ಯ ಹೊಲೆಯಾನ ಮನದೊಳು ನಿಳಯಕ್ಕೆ ಬರೆ ಮತ್ತೆ
ಅಂತಾ ॥ ೧೯ ॥

ಪುಟ್ಟಿದಳಾ ಧನವತಿ ಉದುರದೊಳು । ನೆಟ್ಟನ ನವ ಮಾಸ ತುಂಬೀ ॥
ಹೊಟ್ಟೆಯಿಂದಾ ಪೊರ ಮಟ್ಟಾಗ ನಾಮವ । ನಿಟ್ಟಾರು ನಾಗಸ್ತ್ರೀ
ಯೆಂದೂ ॥ ೨೦ ॥

ನಾಮ ನಾಗಸ್ತ್ರೀಯೆನುತಿರೆ ಯಿತ್ತಾಲು । ಭೀಮ ಮಾದಿಗನಿರಕೊಂಡೂ ॥
ಕಾಮಿನಿ ಸತ್ತು ಸುನಕಿ ವುದರದೊಳು । ನಾಮ ಶುನಕನಾಗಿ ಜೆನಿಸೀ ॥೨೧॥

ಆ ಪುರದೊಳಗೀಹ ಶ್ರೀಧರ ಪರಧಾನ । ರೂಪ ಶೀಲವ ಹೊಗಳುವರೂ ॥
ಪಾಪ ಹರನು ಶ್ರೀ ಜಿನ ಪೂಜೆ । ಧರ್ಮವ ನಾ ಹೊತ್ತು ಮಾಡುವ
ನಿರುತಾ ॥ ೨೨ ॥

ಅಂತಪರಾದನು ಪರದು ಮಾಡುವೆ । ನೆಂದು ಕಾಂತಾಪರಾದಿತಿ ಕರದೂ ॥
ಸಂತತ ದಾನ ಪೂಜೆಯ ನೀ ಮಾಡೆಂದು ಕಾಂತಿಗಿತ್ತನು ಪೊಸ ಪೊಂನಾ॥೨೩॥

ಮಾಡು ಧರ್ಮಾವ ನೀಡು ನಂಬುಗಿಯಾ ನೀ। ಬೇಡಿದ ವಸ್ತುವ ಕೊಡುವೇ॥
ನಾಡೊಳ ಗ್ಯೋಗ್ಯವು ನಾಧನ್ಯ ಹೆಸರೆಂದು । ಬೇಡಿಕೊಂಡನು ಪರದ
ತಿಯಾ ॥ ೨೪ ॥

ಪರದು ಮಾಡುವೆನೆಂದು ಪರದೇಶಕ್ಕೆ ಹೋಗಿ । ಪರಮನೈದು ಮರಳಿದನೂ॥
ಪರ ಧನ ನಿದಕಲ್ಲಿ ಕಂಡು ವರ್ತಿಯಾನು। ಪರದತಿಯನು ಮಾಡುವಳೂ॥೨೫॥

ಮಾಡಾಳು ಧರ್ಮವ ನೀಡಾಳು ಅನ್ನಾವ । ಬೇಡಿದಡಿಲ್ಲೆಂಬು ನುಡಿಯಾ ॥
ರೂಢಿಯೊಳಗೆ ಅಪಕೀರ್ತಿ ಆಯಿತೆಂದು। ಕೂಡಿ ಪೇಳಿದನೊಬ್ಬ ಪರದಾ ॥೨೬॥

ಬಂದು ಪರಾಧನುಪುರವ ನೈದುವಲ್ಲಿ । ಮುಂದೆ ಕಂಡನು ಮಿತ್ರನನ್ನು ॥
ಯಿಂದೀವುದೆಂದು ಪರುದು ಕೊಟ್ಟಲ್ಲೆಯು । ಸಂದೇಹ ಕೊಡು ಮನೆಯೊ
ಳಗೇ ॥ ೨೭ ॥

ನುಡಿದು ಬಂದಾಗಳೆ ಪಾದಂಗಳಾವೆರಸಿ | ಮಡದಿ ಬಂದೆರಗಿ ಪಾದಕ್ಕೆ ॥
ಎಡಿಗಾಳ ನಿಟ್ಟವ ನಡಿಗಾಳ ತೊಳೆದಾಳು | ಯಡಿಯಾಯಿತು ವುಣ
ಲೇಳೂ || ೨೮ ||

ಆ ಸಮಯಾದೊಳು ಕೈಮುಗಿದೊಲಿಯಾಲು | ಶೇಸಿಲಮದನುಳಿಯಾ
ನೂ ॥ ಸೂಸುತ ಕಂಣ್ಣೀರು ಬಸವಳಿದೆಂದಾನು | ಆಸೇ ಹೋದೀತು ನಿಂನ
ವ್ಯಾಗೆ || ೨೯ ||

ಯಲೆ ಪತಿ ಮನೆಗೆ ತಕ್ಕವರನ್ನು ನಿಲ್ಲೀಸು | ಅಲಸದೆ ಬ್ಯಾಗ ನೀ ಬಹುದೂ||
ನಿಲ್ಲಲೆ ಬ್ಯಾಡೆಂದುಸರನು ಮಾಡಿಪರಾದಾಗೆ | ಕಳಹುತವರ ಮನಿ
ಗೆಂದೂ || ೩೦ ||

ಯೆಂದ ಮಾತನು ಕೇಳಿ ಸಂದೇಹ ಯಾತಕೆ । ಯಿಂದು ಕಳುಹು ಯನ್ನ ನೀಗ||
ಮಂದಿ ನೆರಹ ಮಾಡಿ ಕಳುಹಿದನಾಗಳೆ | ತಂದೆಯಿದ್ದ ಡಿಗೆ ಬ್ಯಾಗದಲೀ||೩೧||
ಯಿತ್ತಲು ಶ್ರೀಧರ ಪರದಾನು ಮನಿಯೊಳು | ಚಿತ್ತಾದಿ ಜಿ ನರನು ನೆನೆದೂ|
ವುತ್ತಮ ಗಂಧ ಕುಂಕುಮ ಕರ್ಪೂರವನು | ನಿತ್ಯ ಪೂಜೆಯ ಮಾಡಿ
ನಮಿಸೀ ||೩೨||

ಕಾಮ ಮರ್ಧನನ ಮಂದಿರ ಕೈದು ಪೂಜೆಯ | ನೇ ಮದಿಮಾಡಿ ಕೈ
ಮುಗಿದು||
ಪ್ರೇಮಾದಿ ಸ್ತುತಿಸಿ ವಂದಿಸುತ ಸಂ | ತೋಷದಿ ಆ ಮಹೀಮನ
ಬೀಳ್ಕೊಂಡೂ || ೩೩ ||

ಜಿನಮುನಿಗಳ ಪಾದವನು ಪೂಜಿಸಿ ಮುಂದೆ| ದಿನವ್ರತವನು ಕೈಕೊಂಡು ||
ವಿನಯಾದಿ ಧರ್ಮಾದ ವಿವರಾವ ಕೇಳುತ | ನೆನದು ಬಿಂನ್ನಪವೆಂದು
ಮುನಿಗೇ || ೩೪ ||

ಯನಗೆದಾನ ಪೂಜೆ ಹಿತವೆಂದು ಮಾಡದೆ। ಯನಗೆ ಪಾಪ ಕೊಡು
ವಾಳು || ತನುಮನ ವಚನಾದಿ ಬಿಟ್ಟೆನಾ ಸತಿಯನು | ಜಿನದೀಕ್ಷೆ ಕೊಡು
ಎಂದು ನಮಿಸೀ || ೩೫ ||

ಯಂದ ಮಾತುಗಳಂನು ಬಹುಜನ ಕೇಳುತ | ಸಂದಾದು ಧೃಡ ವ್ರತ
ವೆಂದೂ || ಬಂದು ಗೋತ್ರಜರೆಲ್ಲ ನೆರೆದ ನಾವು ತಂದು ಮಾಳ್ಪೆವು ಮ
ದುವಿಯನೂ || ೩೬ ||

ಚಿಂತೆ ಬ್ಯಾಡೆಂಡು ಶ್ರೀಧರನ ಸಂತೈಸಿ । ಸಾಯಂತರಸೊಳು ಮಾತನಾ
ಡೀ ॥ ಮಂತಣ ವ್ಯಾತಕೆ ಧನವತಿ ಪುತ್ರಿಯು | ಮುಂತೆ ಮಾಡುವುದೆ
ನು ತಾಲೀ || ೩೭ ||

ಇತ್ತಲು ಧನವತಿ ಪುತ್ರಿ ನಾಗಸ್ತ್ರೀಯು | ಚಿತ್ರಾಜಸತಿ ರೂಪಿನಲ್ಲಿ ॥ ಮ
ತ್ತೊಂದು ದಿನದಲ್ಲಿ ಸುನಕಾನಕಾಣಲು । ಚಿತ್ತ ಭ್ರಮಿಸಿ ಪಿಡಿತರಿಸೀ
॥ ೩೮ ||

ತಂದು ಸಾಕುತಿರೆ ಮೋಹ ವ್ಯಾಲಣವಾಗಿ | ತಂದಿತಾಯಿಗಳೆಲ್ಲಾ ನ
ಗಲೂ || ಹಿಂದಣ ಮೋಹಗಳಾರು ಬಲ್ಲರು ಯೆಂದು | ಬಂಧೂಗಳೆಲ್ಲರೂ
ನುಡಿಯೇ || ೩೯ ||

ವಂದು ದಿವಸ ನಾಗಸ್ತ್ರೀಯು ಮಾತೆಯು ಗೂಡೆ | ವಂದಿನ ಜಿನ ಪೂಜೆ
ಯೆಂದೂ ॥ ಯಂದು ನುಡಿಯ ಕೇಳಿ ತಾಯಿ ಸಂತೋಷದಿ । ಯಿಂದು
ಮುಖಿಯ ಬಿಗಿಯಪ್ಪೀ || ೪೦||

ಸಾರ ತೈಲ ಗಂಧ ಪೂಶಿ ಮಜ್ಜನ ಮಾಡಿ | ಶೀರೇಯ ನಿರಿಗಿಡಿದುಡಿಸೀ ||
ಚಾರು ಕುಂಕುಮ ಕಸ್ತೂರಿ ಬೊಟ್ಟು ನಿಟಿಲಾಗಿ । ವಾರೀಜಶರ ಮುಡಿಯೊ
ಳಗೇ ॥ ೪೧ ।

ಮಾಟ ದಂಡುಗೆ ಕಂಕಣ ಜಣರಿನು ತಾಲಿ । ಯಿಟ್ಟತಿ ಕಪ್ಪು ಮಾಣಿಕವೂ॥
ತೊಟ್ಟಭೂಷಣ ನವರತ್ನಾದ ವಡವೇಯಾ | ಯಿಟ್ಟು ಮೂಗುತಿಯ
ಮೂಗಿನೊಳು ॥ ೪೨ ||

ತನು ಸಿರಿ ಗಂಧ ಕೋಮಲ ಚಿತ್ರ ರೂಪಾವು | ವಿನಯ ವಾಣಿಯು ಸೊಬ
ಗಿನಲಿ ॥
ಅನುಮೇಶ ಕನ್ನೆ ಯರತಿ ಪಡಿದಳು ಎಂದು | ಮನಸಿಜ ಬೆಂಬಾಲವಾಗೀ
|| ೪೩ ||

ನಡಿ ಹಂಸೆ ತೊಡೆ ಬಾಳೆ ನಡು ಹರಿ ಮಧ್ಯಾದಿ | ಕೊಡ ಹಾಯಿಟ್ಟದೆ ಹೇಮು ಸ್ಥನದೀ ||
ಮೃಡ ಹಂಸ ಶಶಿ ಮಿತ್ರ ಮುಡಿ ಆರಡಿಗಳಿಂದ | ಮಡದಿ ಮಾಣಿಕ ಕೊಪ್ಪಿ ರ್ದವಳೂ || ೪೪ ||

ಹಿಂದೆ ಮುಂದೆಸೆವರು ಪರಿಚಾರಕರು | ಸಂದಣಿ ರಾಜ ವಾದದಲಿ ||
ಯಿಂದು ತಾರಾಸಂಮ್ಮೇಳದಿ ಒಪ್ಪುತ | ಬಂದಾಳು ಜಿನ ಮಂದಿರಕ್ಕೆ || ೪೫ ||

ಹಾರವುಲುಗೆ ಕಂಕಣ ಜಣರೆನುತಾಲಿ | ತೋರಸ್ಥಾನಕೆ ನಡು ಬಳಿಕೇ
ವಾರೀಜ ಮುಖಿಕರ ಕಮಲಾವ ಮುಗಿಯುತ | ಮಾರವಿಜಯ ಜಿನಗೆ ರಗೀ ||೪೬||

ಮುಂದೆ ಮುನಿಯ ಕಂಡು ವಂದೀಸಿ ಬಲಗೊಂಡು | ನಿಂದು ಮೃದು ವಾಕ್ಯವ ನುಡಿದೂ ||
ತುಂವ ವಸ್ತುವನೆಲ್ಲ ಪೂಜೆಯು ಮಾಡುತ ವಂದಿಸಿ ನಿಂದು ಕೊಂಡಾ ಡೀ ||೪೭||

ಜಿನವರನಿವಾಣಿ ಯಕ್ಷರಕಂಡು ಮುದದೋಳು | ಅನುನೆಯ ಕ್ರಮದಿ ವಂದಿಸುತಾ || ದಿನವ್ರತವನು ಕೊಂಡು ಕರಗಳ ಮುಗಿದಾಳು | ವಿನ ಯಾದಿ ಬೆಸಗೊಳೆ ಮುನಿಯಾ || ೪೮ ||

ಕಷ್ಟ ಸಂಸಾರದಿ ಹುಟ್ಟಿ ಹೊಂದುತ ಬಂದು | ಬಟ್ಟೆಮನಸುಗತಿವಡದೇ | ಪುಟ್ಟೆ ಜಿನಮುನಿಗಳ ಕಂಡೇನು ನಾನೀಗ | ಕೆಟ್ಟಿತು ಪಾಪ ಸಂತಿಯೂ | ೪೯ |

ಯನಗೆ ದಾನ ಪೂಜೆ ಶೀಲೋಪವಾಸವಾ | ಮನಕೆ ತಿಳಿವಂತೆ ಪೇಳಿ |
ಅನುನಯದೊಳು ಬೋಧಸಾಗರೆಂಬ ಮುನಿ | ವಿನಯಾದಿ ಪೇಳಿ ಕೇಳಿದಳೂ || ೫೦ ||

ಕೇಳಿ ಸಂತೋಷಾದಿ ಸೊಲಾದೆ ಸೋಡಲೂ| ಕೋಲು ತಿರುವಿನೊಳು
ಹೊಡಿ| ಬಾಲೀಯ ಬಲದಿಂದ ಮನಸಿಜನೆಲೆಯಲು | ಕೋಲು ತಾಗಿತು
ಶ್ರೀಧರಗೇ || ೫೧ ||

ನೊಂದ ಶ್ರೀಧರನ ನಾಗಸ್ತ್ರೀಯು ಕಂಡಾಳು | ಮಂದಿಯೊಡನೆ ಮನೆಗೈದು ||
ಚಂದಾದ ಮಂಚಾದ ಮೇಲೆ ಬಂದೊರಗಾಲು | ಅಂದು ಧನವತಿಯು
ಕಂಡು || ೫೨ ||

ಲಲ್ಲೆಮಾತುಗಳಿಂದ ಮಗುವನು ತೆಗದಪ್ಪಿ । ಗಲ್ಲವಪಿಡಿದು ಮುದ್ದಾಡಿ ||
ಯುಲ್ಲತನುವಿ ನೆಡೆಯನು ನೋಡಿ ಮಗಳೀಗೆ ಪುಲ್ಲ ಶರನಬಾಧೆ ಯಂದು ||೫೩||

ಇತ್ತ ಶ್ರೀಧರ ಪರದನ ಮನಸಿನೊಳು| ಚಿತ್ತಾ ಜನೆಸುಗೀಗೆನೊಂದು ||
ಪತ್ತಿ ಸುಡಲು ಕಮಾಗ್ನಿ ಸಂತಾಪದಿ| ಮಿತ್ರ ಮೋಹವ ಪರಿಹರಿಸೀ ||೫೪||

ಒಂದು ದಿವಸ ಶ್ರೀಧರ ಪರದನಡಿಯೊಳು | ಬಂದು ಗೋತ್ರಜರೆಲ್ಲ ನೆರೆದು||
ಇಂದು ಮುಖಿಯನೀಗ ಮಾಡುವೆವೆಂದೇಳಿ | ಬಂದು ಬೇಡಿದರು ಬಾಲ
ಕಿಯಾ || ೫೫ ||

ಕೇಳಿ ಸಂತೊಷದಿ ಧನವತಿ | ಬಾಲೆಯ ಕೊಡ ವೆ ಶ್ರೀಧರಗೆ ||
ಕಾಲವಂಚನೆಯನು ಮಾಡುವದ್ಯಾತಕೆ| ಲೀಲೆಯಿಂದಾರೆಯನೆರದೂ ||೫೬||

ನಾಗಸ್ತ್ರೀಕನ್ನೆಯು ಶ್ರೀಧರಪರದಾನು| ಲಾಗ ಬಂದರು ತಮ್ಮ ಮನಿಗೇ ||
ಭೋಗಕ್ಕೆ ತಕ್ಕ ವಸ್ತುವನೆಲ್ಲವ ನಿತ್ತು । ಸಾಗಿದಳ್ ಧನವತಿ ಮನಿಗೇ|| ೫೭||

ಅಂತವ ರೀರ್ವರು ಸುಖಶಿರಿವಳಗಿರೇ | ಕಾಂತೆ ಸವತಿಪರ ದಿತಿಯು ||
ಚಿಂತೆವಿಡಿದು ತವರೂರಿಂದಲೀ ಬಂದು| ಕಾಂತ್ತ ಶ್ರೀಧರ ನಡಿಗೆರಗೀ||೫೮||

ಬರಹೇಳದೆ ಅಲ್ಲಿರದೆ ಬಂದಳು ಯಂದು| ಪರದಾನುಮನದೊಳುನೊಂದು ||
ಪುರುಷ ಹೇಳಿದ ಮಾತಮಿೂರಿದ ಫಲವೆಂದು| ಪರದಿತೆ ದುಃಖಿತೆ ಆಗಿ|| ೫೯||

ಕರುಣೀಸು ವೈಶ್ಯಕುಲೊತ್ತುಮ ಪುರುಷನೆ | ಕರವ ಮುಗಿದು ಬೇಡಿ
ಕೊಳುತಾ ||
ಸ್ಥಿರವಲ್ಲ ಶಿರಿ ಭೋಗವೆಂದು ನಾಗಸ್ತ್ರೀಯು। ಸಿರಬಾಗಿ ಪತಿ ಚೆರಣಕ್ಕೆ ||೬೦||

ಎಂದ ಮಾತನು ಕೇಳಿ ಸಂದೇಹ ಮಾಡುತ್ತ । ಗೋದೀಯು ಮುನಿಯ ತೋರಿಸಿದಾ ||
ಹಿಂದೆ ಮಾಡಿದ ಭೋಗದಂತಾದ ಫಲವೆಂದು | ಮಂದ ಮತಿಯು ಇರುತಿರಲು ||೬೧||

ಯಿತ್ತ ಶ್ರೀಧರಪತಿ ನಾಗಸ್ತ್ರೀ ಸತಿಯಾಳ | ವತ್ತೀಗೆ ಕರದು ಮನ್ನಿಸಿದಾ ||
ನಿತ್ಯದಾನ ಪೂಜೆಯತಿಗಳ ಮನ್ನೀಸು | ಕೃತ್ಯ ವೆಂದು ಪೇಳಿದನು ||೬೨||
ಪರದು ಮಡುವೆನೆಂದು ಪರದಾರ ಕೂಡಿಸಿ | ಭರದಿಂದ ಛೈತ್ರವನೇರೀ ||
ಪರದೇಶಕ್ಕೆ ಪೋಗಿ ನೆರವ ಛೈತ್ರವ ಮಾರಿ | ಹಿರಿದು ಲಾಭವ ಪಡೆದಿತ್ತ ||೬೩||

ನಾಗನಾರಿ ತಾಯಿ ಧನವತಿ । ಚಿತ್ತಾದಿಮ ಗಳನ್ನು ನೆನದೂ ||
ವೃತ್ತಮುವಸ್ತುಕಜ್ಞಾಯ ಸಮೇಳದಿ|| ಹೆತ್ತಮಗಳ ತಾಯಿ ಕರದೂ ||೬೪||
ಸ್ನಾನ ಮಜ್ಜನ ಭೋಜನಾದಿಗಳಿಂವಲಿ | ತಾನುಪಚರಿಸಿ ಬಾಲಕಿಯಾ ||
ಮಾನಿನಿದಾನಿ ಗುಂಕಳು ಹಾಲು ಪ್ರೇಮಾದಿ ತಾನಿಂತು ತನ್ನ ಮಂದಿರದೀ||೬೫||
ನಿತ್ತ್ಯದಾನ ಧರ್ಮ ಪರ ವುಪಕಾರವು| ನಿತ್ತ್ಯ ಪೂಜೆ ನೋಂಪಿ ವ್ರತವೂ||
ಸತ್ತ್ಯ ಸದಾಚಾರಿ ಪತಿ ಭಕ್ತಿ ನಾಗಸ್ತ್ರೀ | ಸತ್ತ್ಯ ವಂತೆಯು ಮಾಡುತಿರಲು ||೬೬||

ವಂದು ದಿವಸ ನಾಗ ನಾರೀಯ ಪಿರಿದಕ್ಕ | ಬಂದು ಬಾಗಿಲ ಮುಂದೆನಿಂದೂ ||
ಸಂದೇಹ ಮಾಡುತ ಕರಿಯೆನಿನ್ಯಾತಕೆ | ಬಂದ ಕಾರಣ ಕೆಲಸೇನು || ೬೭ ||

ಬಂದದ್ದು ಮಾಡುವೆ ಪಾದವ ತೊಳೆವೆನು | ತಂದಿಡುವೆನು ಪಾವ್ಡಗಳನೂ ||
ವಂದಾನೆಮಾಡುತ ಮಡಿಗಾಳು ತೆಗದಾರೆ ಸಂದಿಸುವದು ಪುಣ್ಯ ಫಲವು ||೬೮||
ಯುಂದು ಯಿಚ್ಛೆಯು ಕೆಲಸ ಮಾಡಿ ಬೇಗಾದಿ | ಸಂದಿಸಿಮಡಿಗಾಳಪಿಡಿದು ||
ಚಂದ ದಿಂದಿಘತಿರ ಲೊಂದು ದಿವಸ ದೊಳು । ಹೊಂದಿದ ಶಶಿಯಂತ್ತೆ ಮುನಿಯೂ ||೬೯||

ಬಂದಾರು ಶ್ಯತಸಾಗರ ರೆಂಬ ಮುನಿಗಳು | ಹೊಂದಿದರೈನೂರ್ವೆರಸೀ ||
ವಂದಾಗಿದೇಗೂಲ ಹೊಕ್ಕಾರೆಂಬಾ ನುಡಿ| ಅಂದು ಕೇಳಿ ನಾಗಸ್ತ್ರೀಯು||೭೦||

ಯೆದ್ದು ಬೇಗದಿ ಪೊಗಿ ಮುಗಿಗಳ ಪಾದಕ್ಕೆ । ಪೊದ್ದಿಸಾಷ್ಟಾಂಗ ಮಾಡಿ ||
ಸಿದ್ಧಿ ಆಯಿತು ಯೆಂದು ಪುಣ್ಯಾವ ಕೊಡುಯಂದು | ಮುದ್ದು ನುಡಿ
ಗಳಿಂದ ಬೇಡಿ ||೭೧||

ಬಂದರೈ ನೂರ್ವರ ಮುನಿಗಳ ಪಾದಕ್ಕೆ | ಚಂದಾದಿ ಪೂಜೆಯು ಮಾಡಿ ||
ಸಂದೀಸಿ ಭಕ್ತಿಯೊಳಾಹಾರ ವಿಳೆಳು ಅಂದು ಪರಶಿಪೋಗಲಿತ್ತಾ ||೭೨||

ಸಂದಾಣಿ ಕೆಲಸದೊಳಗೆ ಮರೆದಕ್ಕನ | ಇಂದು ಕರಿಯಲಿಲ್ಲ ನಾನು ।
ಯೆಂದು ನುಡಿವ ನುಡಿಯನು ಕೇಳಿ ಸುನಕಾನು | ಮುಂದೆದ್ದು ಪೋಗಿ
ಬಾಗಿಲೊಳು ||೭೩||

ಕಂಡು ಬಾಲವ ನಲಿದಾಡೀಸಿವುರುಳುತಾಬೈಬಂಡಿಸಿ ಬೈದು ಕೋಪಿಸುತಾ ||
ಗುಂಡಿಗಿ ವಳಗಿರ್ದ ಕುದಿವತೈಲವ ತಂದು । ಮಂಡಿಯೊಳಿಳಿಯೊಲು
ಪೊಯ್ಯೇ ||೭೪||

ಅಟ್ಟಳೆ ವಾರುತ ಮಿಟ್ಟೆ ಬೀಳುತ ಬಂದು | ನೆಟ್ಟನೆ ಬಾಗಿಲೊಳ್ಬೈದೂ
ನಾಗನಾರಿಯುಕಂಡು | ಮುಟ್ಟೆ ನೆಗಪಿ ನೋಡಿ ನೋಡಿ || ೭೫ ||

ದೇವಮಾನವರೆಲ್ಲ ನೋವಿಂದ ಸಾಯ್ವರು | ಜೀವಾನೀಮಾಡಿದ ಫಲವೂ ॥
ಭಾವಿಸುತ ಬೇರೆಯಾಗಿ ನಿಲ್ಲೋ ನೀನು | ದೇವಗತಿಗೆ ನೀನೊಯ್ದು ॥ ೭೬ ॥

ಹಿಂದೆಮಾಡಿದ ವೇದ ಪರರಿಗೆ ನೀನು | ಇಂದು ತೋರಿತು ನಿನಗೀಗ ॥
ಎಂದು ನೋವು ಬ್ಯಾಡ ಚಿತ್ತಕೆ ಎಂದಳು| ಸಂದಿಸುವದು ಸುಭ ಫಲವೂ||೭೭||

ಚಂಚಲ ವಿಲ್ಲದೆ ಪಂಚ ಮಂತ್ರವ ಕೇಳು|ನಿಶ್ಚಿಂತ ಭಾವಿಸು ನೀನುಗತಿಯಾ ||
ಸಂಚಿತ್ತ ಮನಸನು ನಿಲಿಸಿ ಧ್ಯಾನಿಸು ನೀ ಮುಕ್ತಿಗತಿಗೆ ಬ್ಯಾಗವೈದು||೭೮||

ಎಂದು ಪೇಳೆ ಸಮಾಧಿ ಸಂತೋಸದಿ ಸುನ್ನಿನ ತನು ಬಿಟ್ಟು ಬೇಗ ॥
ಬಂದು ಅಗಳೆ ಸದ್ಧರ್ಮದೊಳಗೆ ಬಿದ್ದು ಅಂದು ದೇವಾನಾಗಿ ಜೆನಿಸೀ||೭೯||

ಪುಟ್ಟ ದಾಕ್ಷಣ ಪಾಪವ ಪರಿಹರಿದಾನು । ನೆಟ್ಟನೆ ಪೊಡಾಠ ಪ್ರಾಯಾ ||
ಗಟ್ಯಾದ ಕಾಯದಿ ದೇವಾಂಗವದೊಳು| ತೊಟ್ಟು ಭೂಷಣ ನವರತ್ನ ||೮೦||

ದೇವ ವ್ಯಂತರ ಕುಲಕನ್ನೀಯರೆಲ್ಲಾರು | ದೇವಾನ ಬಳಸಿ ಬಂದಿರಲೂ ||
ದೇವದುಂದುಭಿಗಾಳು ಮೊಳಗೂತ ಸಹಬಂದು ದೇವ ಬೆಸಸುಬೆಸಶೆನುತಾ
|| ೮೧ ||

ಆ ಸಮಯದೊಳು ನಾಗಸ್ತ್ರೀ ಮಾಡಿದ | ಲೇಸಾನೆ ನೆನೆದುಕೊಂಡಾಡಿ ||
ಶಾಶ್ವಿತ ಸುಖವು ಪಂಚ ಮಂತ್ರದಿಂದಲಿ| ಲೇಸಾಯಿತೆಂದು ತಾನರಿದಾ || ೮೨ ||

ಸದರವೆಂದೆನ ಬ್ಯಾಡ ಪಂಚ ಮಂತ್ರದ ಫಲೆ। ಅದರಿಂದ ಮೊಕ್ಷಾದ ಸುಖವೂ||
ವದಗಿ ಬಂದಾ ರೂಪತೋರಿ ನಾಗಸ್ತ್ರೀಯು । ಹೃದಯ ಸಂತೈಸಿತ್ತ ಪೋದಾ
|| ೮೩ ||

ಅತ್ತ ಶ್ರೀಧರ ಶೆಟ್ಟಿ ತಂದ ವಸ್ತುವ ಮಾರಿ | ಮತ್ತಧಿಕವು ಲಾಭವಾಗೆ ||
ಮುತ್ತು ಮಾಟ್ಟಣಿಕ ಪಟ್ಟೆಚೀನಾಂಬರವನ್ನು | ಕಸ್ತೂರಿ ಗಂಧ ವಸ್ತುಗಳೂ
|| ೮೪ ||

ತುಂಬಿ ಭೈತ್ರವಸೇರಿ ಪುರಕಭಿ ಮುಖವಾಗಿ | ಅಂಬಿನಕಡಲೊಳುಪರಿಯೇ ||
ಗಂಭೀರ ಘಾತದ ಸುಳಿಗಾಳಿಯೊಳಗಾಗಿ | ಜಂಬಲವಿಲ್ಲದೆ ತಿರುಗೀ || ೮೫||

ಅಂತಾದು ಕಂಡು ಶ್ರೀಧರ ಶೆಟ್ಟಿ ಬ್ಯಾಗದಿ । ಸಂತೈಸಿ ತನ್ನ ಮನದೊಳೂ||
ಚಿಂತಿಸಿದನು ಪರಮಾತ್ಮನಹೃದಯಾದಿ । ಶಾಂತಿ ಜಿನರ ಭಾವಿಸುತಾ
|| ೮೬ ||

ಆ ಸಮಯದೊಳು ದೇವಸಿಂಹಾ | ಸನ ಪೂರ್ವ್ವರ ಕಂಪೀಸೆ ಬೇಗ ||
ಕ್ಲೇಶ ಶ್ರೀಧರ ಗಾದುದರಿಜವಧಿಯಿಂ | ಲೇಸು ಮಾಡುವೆನೆಂದು ಬಂದಾ
|| ೮೭ ||

ಬಂದು ಭೈತ್ರವ ಪಿಡಿದೆತ್ತಿ ಪ್ರತಾಪದಿ | ತಂದಿರಿಸಿದನು ಬೇಗದೊಳೂ ||
ವಂದಿಸಿ ದೇವಾಗೆ ಕರಗಾಳ ಮುಗಿದಾನು | ಅಂದಾನುದೇವ ಶ್ರೀಧರಗೇ
|| ೮೮ ||

ನಿನ್ನ ಮನಿಯು ಬಾಗಿಲ ಕೃಷ್ಣ ಸುನಕಾನು | ನಿನ್ನ ಹಿರಿಯು ಹೆಂಡತಿಯಾ॥
ಸೊನ್ನೀಲಿ ಕರಿಯಾಲು ಬಂದೀತು ಇದುಯಂದು | ಮುನ್ನಭ್ಯೆಬಡಿಯಲು
ಸಾಯೀ || ೮೯ ||

ಮತ್ತೊತ್ತಿ ತಲಿ ಸೂಡೆ ನಾಗಸ್ತ್ರೀ ಕಂಡಾಳು | ವೃತ್ತುಮ ಪಂಚ ಪದವನೂ||
ಚಿತ್ತವಲಿಡು ತನುವನು ಬಿಟ್ಟಿನಾಕ್ಷಣ । ಯಿತ್ತ ದೇವನಾದೆಕೇಳು ॥೯೦॥
ಯೆಂದು ಪೇಳಿ ನವರತ್ನದ ಹಾರವ । ವಂದೀಸಿ ಕೊಟ್ಟು ಶ್ರೀಧರಗೇ ||
ಹಿಂದೆ ನಾಗಸ್ತ್ರೀಯು ಮಾಡಿದ ಲೇಸಿಗೆ । ಸುಂದರ ಪದಕ ಕೊಟ್ಟು
ಪೋದಾ ||೯೧||

ಶೆಟ್ಟಿ ಶ್ರೀಧರ ಸಂತುಷ್ಮ ಚಿತ್ತನಾಗಿ || ಓಲೈದು ತನ್ನಯ ಪುರಿಗೆ ||
ನಿಷ್ಟ ನಾಗಸ್ತ್ರೀಯ ಅತಿಶಯ ಗುಣವನು । ಸದುಷ್ಟವ ನೋಡುತ
ಬಂದಾ ||೯೨||

ಬಂದಿದಿರಲಿ ನಿಂದು ನಾಗಸ್ತ್ರೀಯುಳು ಕಂಡು ! ವಂದೀಸಿ ಕರಗಳ ಮು
ಗಿದು ॥ ತಂದಾರತಿಯತ್ತಿಯರಗಾಲು ಚರಣಕ್ಕೆ | ಯಿಂದು ಮುಖಿಯು
ಪಿಡಿದೆತ್ತಿ ॥೯೩||

ಅಡಿಗಿ ಆಯಿತು ವುಣಲೇಳಿರಿ ನೀವೆಂದು । ನುಡಿಕೀರ ಮಧುರಾದಿಕರಿಯೇ ||
ವೃಡು ರಾಜ ಮುಖಿಯಾಳ ನುಡಿಯು ಲಾಲಿಸುತಾಲಿ | ಮಡದೀಯ
ಕೊಂಡುಂಡು ತಣಿದೂ || ೯೪ ||

ವುಂಡಾಕ್ಷಣದಲ್ಲಿ ಭಾಗ್ಯ ತಂದೀಯ್ಯಲು | ಭಂಡಾರ ದುತ್ತುಮ ತಗಸೀ ||
ಮಂಡಲ ಪುರಪತಿ ಚಾರುನರೇಶನ್ನ । ಕಂಡಾನು ಶ್ರೀಧರ ಪರದಾ
॥ ೯೫ ||

ಅಟ್ಟಹಾಸದಿ ತಾನು ತಂದ ಕಸ್ತುರಿ ಗಂಧ | ಇಟ್ಟು ಪುನಗುಭೊಗ
ದ್ರವ್ಯಾ ||
ಕಟ್ಟಿಸಿ ಮುಕ್ತಿಕ ರತ್ನದ ಹಾರವ ಶೆಟ್ಟಿ | ಕೊಟ್ಟು ಕೈಯ್ಯತಾ ಮುಗಿದಾ
|| ೯೬ ||

ತರ ಹೇಳಿದಂತ್ತ ವಸ್ತುವನು ತಂದನೆಂದು । ಪರದನ ಭೂಪತಿ ಪೊಗಳೆ ||
ನೆರದ ವೋಲಗದಲ್ಲಿ ಪಢದನ ಮನ್ನಿಸಿ । ಪರಮ ಸಂತೊಷದಿ ಕಳುಹೀ
|| ೯೭ ||

ಬಂದಾಗಳೇ ಕಂಡು ನಾಗಸ್ತ್ರೀ ಪುರುಷಗೆ | ಗಂಧ ತೈಲವ ಪೂಸಿದಳು ||
ಚೆಂದೀರವ ಧನೀಯು ನಿಶವು ಕಳೆದರಾಗ । ಗಂಧ ಕರ್ಪುರ ಪಿಡಿದು || ೯೮ ||

ಅಂತವ ರೀರ್ವರೂ ಪುಣ್ಯ ಮಂಗಲರಾಗಿ | ಶಾಂತ್ತಿ ಜಿನರಪೂಜೆಮಾಡಿ ||
ಮುಂತ್ತಿರ್ದ ಮುನಿಗಳ ಪೂಜೆವಂದನೆಮಾಡಿ | ಸಂತಾತ ಸಂಗಕೆ ನಮಿಸೀ
|| ೯೯ ||

ಮರಳಿ ವಂದನೆಮಾಡಿ ಕ್ರಮದಿಂದ ಗುರುವಿಗೆ ಪರದನು ಪೇಳಿ ಭಾವರಿಯಾ||
ಇರದೆಲ್ಲ ಶ್ರಾವಕ ಭವ್ಯ ಜನಂಗಳು | ಗುರುಪ್ರಾಸಾದಕೆ ಬರಬೇಕು || ೧೦೦ ||

ಎಂದೆಲ್ಲರು ಕೂಡಿಕೊಂಡು ಮನಿಗೆಬಂದು | ಚಂದದಿ ಕ್ರಮದಿಂದ ನಿಲಿಸೀ ||
ಅಂದು ಹರುಷದಿಂದಾ ಹಾರವನಿತ್ತುತಾ । ವೊಂದಿಸಿ ವಿನಯಾದಿ ಕಳುಹೀ
|| ೧೦೧ ||

ಕಳುಹಿ ತಾವೀರ್ವರು ಭೋಜನವನು ಮಾಡಿ| ಲಲನಿ ನಾಗಸ್ತ್ರೀಯ ಕರಿದೂ||
ಘಳಿಲಾನೆ ಬಂದೆರಗಲು ಪಿಡಿದೆತ್ತುತ | ಸುಳಿ ಗುರುಳನು ನ್ಯಾವರಿಸೀ
|| ೧೦೨ ||

ದಿವ್ಯಾ ಭರಣ ಭೂಷಣ ವಸ್ತ್ರ ಚಿನ್ನದ । ದಿವ್ಯ ಗಂಧಮಾಲ್ಯವನೂ ||
ದಿವ್ಯರತ್ನಮಯ ಗಂಭೀರ ಹಾರವ | ದೇವ ಇತ್ತನು ಕೇಳು ನಿನಗೇ||೧೦೩||

ಎಂದು ಪೇಳಿದ ನೀ ಹಿಂದೆ ಮಾಡಿದ ಲೇಸು । ಇಂದು ಮುಖಿಯು ನಾಗ
ಸ್ತ್ರೀಗೆ ||
ಚಂದದಿಂದಂಪತಿವಂದಾಗಿ ಇರುತೀರೆ । ಅಂದು ಕಂಡನು ನರನೊರ್ವಾ
|| ೧೦೪ ||

ಕಂಡು ಪೇಳುತ ನೃಪನಿಗೆ ಪರದನ | ಕೊಂಡುಬಾ ನಮ್ಮಯ ಬಳಿಗೇ ||
ಪೆಂಡಾತಿಗಿತ್ತನ್ತ ಪದಕಾವ ಬೇಡಲ್ಕೆ | ಮಂಡಲ ಪತಿ ಕಳುಹಿದನು
|| ೧೦೫ ||

ಬೇಡಲು ಪದಕವು ಶ್ರೀಧರಯಿತ್ತನು | ನೋಡಿ ನೃಪತಿ ಬೆರಗಾಗೀ ||
ಕೂಡಿ ಮೋಹದ ಸತಿ ಕೊರಳಿಗೆ ಹಾಕಲು । ಕೂಡಿ ಹೆಡೆಯ ನೆತ್ತಿ ಮೆರಿ
ಯೇ || ೧೦೬ ||

ಶಂಕೇಸಿ ಪದಕಾವ ತೆಗೆದು ಭೀತಿಯಲ್ಲಿ । ಭೋಂಕೆಂಬುತಾ ಧ್ವನಿದೋರೇ ||
ಶಂಕೆಗೊಂಡು ಭೂಪತಿಯು ನೋಡುತ | ನಿಸ್ಸಂಕ ಶ್ರೀಧರ ಶೆಟ್ಟಿಕರಿಶೀ
|| ೧೦೭ ||

ಪರದ ನೀನಿತ್ತಂತ ಪದಕಹ ರೂಪವಾಗಿ | ಮೆರೆವ ಕಾರಣವೇನು ಪೇಳೂ ||
ಸುರಲೋಕದಂತಾರ ದೇವ ಕೊಟ್ಟಾತನು | ಕರವಮುಗಿದು ನಾಗಸ್ತ್ರೀಗೆ
|| ೧೦೮ ||

ಕೇಳೊ ದೇವ ನಮ್ಮ ಬಾಗಿಲ ನುನಕಗೆ | ಪೇಳಿದಳ್ ಬಾಲೆ ಮಂತ್ರವನೂ ||
ಲಾಲಿಸಿ ಪ್ರಾಣವಬಿಟ್ಟು ದೇವನಾಗಿ | ಲೀಲೆಯೊಳಿಂತಿರಲತ್ತಾ || ೧೦೯ ||

ಕಡಲೊಳು ಬೈತ್ರವನೇರಿ ಪರಿದುಬರೆ | ಎಡೆಗಾಳಿ ಸುಳಿಯೊಳಗಾಗೀ ||
ಬಿಡಿಸೂವರಿಲ್ಲೆಂದು ಧೃಡಕಂಪವಾಯಿತು | ಗಡನೆವ್ಯಂತರ ದೇವ ಬಂದೂ
|| ೧೧೦ ||

ಪಿಡಿದು ತೆಗೆದು ಕೂಡೆಗಿಟ್ಟು ರೂಪವ ತೋರಿ | ಮಡದಿ ನಾಗಸ್ತ್ರೀಯು ಗೆರ
ಗೀ ||
ಇಡುಯಂದು ಕೊಟ್ಟನು ದೇವ ಪದಕನನ್ನು | ಬಡವರು ಪಡಿಯಲಿ
ಬಹುದೇ || ೧೧೧ ||

ಸಿಡಿಲಂತ್ತೆ ಕೋಪಿಸಿ ಹುಸಿನುಡಿದಾನೆಂದು । ಪಿಡಿದು ಪೊಯಿಂದಾ ನುರಾಜಾ||
ಗಡಗಡ ನಡುಗೀತು । ಸಭೆಯೊಳಗೆಲ್ಲರು ಬಿಡಿದು ನೂಕಿ ಪೊರಮಡಿಸೀ
|| ೧೧೨ ||

ಇತ್ತಾಲುನ್ಯಂತ್ತರ ದೇವ ಸಭಿಯೊಳು । ಮುತ್ತೀನ ಗದ್ದುಗೆ ನಡುಗೆ ||
ಚಿತ್ತದೊಳವಧಿಯಿಂತಿಳಿದಾನಾ ಕ್ಷಣದೊಳು । ಮತ್ತು ಶ್ರೀಧರಗಾದ ಬಾಧೇ
|| ೧೧೩ ||

ಬಲುತ ಗಾಳಿಗಳಿಂದ ಮೇಘ ಗರ್ಜನೆ ಮಾಡಿ । ಸುರಿವುತ ಜಲವಾಣಿ ಕಲ್ಲು||
ಮೆರಿವ ಅಂಬರ ಮಿಂಚು ಕಿಡಿಕಿಡಿ ಯಾಗುತ । ಭರದಿ ಪುರವ ಪೊಕ್ಕನಾಗ
|| ೧೧೪ ||

ಅರಸನ ಪಿಡಕೊಂಡು ಭರದಿ ಬಾಧೆಯನಾಡೆ । ಅರಸಂಜಿ ಬಲವೊಡಿತಾಗೆ ||
ಕರವನುಗಿದು ಪ್ರಾಣನುಳುಹೆಂದು ಕಂಪಿಸಿ । ಚಿರಣಕ್ಕೆರಗಿ ಹಲ್ಲುಕಿರದೂ
|| ೧೧೫ ||

ಎನ್ನಳವಲ್ಲ ಭೂರಾಜ ಕೇಳ್ ನೀ ಹೋಗಿ । ಬಿನ್ನಪ ಮಾಡು ಶ್ರೀಧರಗೇ ||
ಪುನ್ನತಗುಣ ಶೀಲೆ ನಾಗಸ್ತ್ರೀಯಿಗೆ ಪೇಳು । ಎನ್ನ ಕಾಯಲಿಬೇಕು ಎಂದೂ
|| ೧೧೬ ||

ಪೇಳಲು ನೃಪತೀಯು ಬೇಗದಿಂದಲಿ ಬಂದು । ಲೀಲೆಯಿಂದೀರ್ವರಿಗೆರಗೇ ||
ಬಾಲನ ಪಿಡಿವಂತೆನೆಗಪಿ ಸಂತೈಸುತ । ಮೇಲೆ ದೇವಗೆ ಕೈಯಮುಗಿದು
|| ೧೧೭ ||

ದೇವ ಕೇಳ್ ಸಮ್ಮಯ ವಡಿಯುನ ಕಾಯ್ಬುದು । ಭಾವ ಸುದ್ಧದಿ ಪೇಳುವೆ
ನೂ ||
ಪಾವನ ವಾದೇವು ನಿನ್ನಿಂದ ನಾವೆಂದು । ಜೀವದಯಾ ಪರನೆನಲೂ ||೧೧೮||

ಎಂದವಮಾತನು ಕೇಳಿ ವ್ಯಂತಾರ ನುಡಿದಾನು । ಹಿಂದಾಣ ಸಂಸ್ಕೃತಿಯಾ ||
ವಂದುಳಿಯದೆ ಮೂರು ಭವದ ಸಮ್ಮಂದಾವ । ಅಂದುಪೇಳಿದ ಸರ್ವಜನಕೇ
|| ೧೧೯ ||

ಧರ್ಮಜೀವಾಯಿ, ಹೊಸಾದ ಪ್ರತವನೀಗ । ಸನ್ಮತಿಗಳು ಧರಿಸುವರೂ ||
ಕರ್ಮವಿಂತ್ಯಾ ಮತ ಮೂಢ ಮಾಮುಗಳನ್ನು । ಧರ್ಮವು ಪರಿಹರಿಸುವದೂ
|| ೧೨೦ ||

ದೇವರೂಪವ ತೋರಿ ಯಲ್ಲಾರ ಮನ್ನೀಸಿ । ಪೂವಕರಿದು ನಾಗಸ್ತ್ರೀಗೆ ॥
ದೇವದುಂದುಭಿ ಝೇಂಕರಿಸುತ ನಿರ್ವಾಣ । ದೇವ ಅಂತರ ಪುರಕೆ ಪೋದ
ನಿತ್ತಾ ॥೧೨೧॥
ಇತ್ತಲು ರಾಜ ರಾಜಾದಿಗಳೆಲ್ಲರು । ಮತ್ತ ಪುರದ ಜನ ನೋಡಿ
ಚಿತ್ತಾದಿ ಧರ್ಮವ ನಿಜವೆಂದು ಹರುಷಾದಿ । ವುತ್ತಮ ವ್ರತಗಳ ಪೊ
ಗಳೀ ॥೧೨೨॥
ನರಪತಿ ಮಂತ್ರಿಯು ಮಾರ್ಬಲ । ಸಹಿತದಿ ನೆರೆದು ಬಂದರು ಜಿನಗೃ
ಹಕೇ । ಕರವಮುಗಿದು ಜಿನ ಮುನಿಗಳ ಪೂಜಿಸಿ । ಯಿರದೆ ಬಿಟ್ಟರು॥
ಮೂರು ಮುಥಾ ॥೧೨೩॥
ಅಂತವರೆಲ್ಲಾರು ನಾಗಸ್ತ್ರೀ ಪರದಾನ । ಸಂತಾತಿ ನೆರೆದು ಕೊಂಡಾಡಿ ॥
ಕಂತು ವಿಜಯ ಶಾಂತಿನಾಥ ಸ್ವಾಮಿಗಳನ್ನು ಸಂತೋಷ ಭವ್ಯರು ಪೊ
ಗಳೀ ॥೧೨೪
ಅಂತ್ತವರೀರ್ವರು ನಾಗಸ್ತ್ರೀ ಪರವಾನು । ಸಂತಾತದಾನ ಪೂಜೆಯಲೀ ॥
ಮುಂತೊಂದು ದಿನದಲ್ಲಿ ಜಿನಮುನಿಗಳ ಕಂಡು । ಚಿಂತ್ತೀಸಿ ವೈರಾಗ್ಯದಲೀ
॥ ೧೨೫ ॥
ಮುನಿಗೆ ವಂದಿಸಿ ಶ್ರೀಧರ ಶೆಟ್ಟಿ ನಾರಿಯು।ವಿನಯದಿಂದಲಿ ಕೈಯಮುಗಿದೂ॥
ತನುಮನವಚನವಂಚನೆಗಳು ಇಲ್ಲದೆ। ಜಿನ ದೀಕ್ಷೆಯನು ಧರಿಸುವೆವು॥ ೧೨೬॥
ಎಂದುನುಡಿದ ನುಡಿಗಳುಕೇಳಿ ಜಿನಮುನಿ । ಅಂದಾವ ತಿಳಿದು ದೀಕ್ಷವನೂ ॥
ಮುಂದಾಣಗತಿಯು ಸಾಧಿಸಿ ಕೊಳ್ಳಿನೀವೆಂದು । ಅಂದು ಕೊಟ್ಟರು ಆಸ್ರಮ
ವಾ ॥ ೧೨೭ ॥
ಹೀಂಗದಂಗೆನೆ ಮಿಚ್ಚ್ಯುವಂದಾದಿ ಕರ್ಮವ । ಭಂಗೀಸಿ ಕಡಿದು ಕತ್ತರಿಸೀ ॥
ಲಂಗೀಸಿ ಮೋಕ್ಷಾವ ಪಡವ ಶ್ರೀಧರ ಮುನಿ ಅಂಗವನೆಂತು ವರ್ಣಿಪೆನಾ
॥೧೨೮॥
ಯಿತ್ತ ನಾಗ ನಾರಿ ಕಾಂತಿಯ ರೂಪಪ್ಪ ವುತ್ತುಂಗ ಸರ್ವಾರ್ಥ ಸಿದ್ಧಿ ॥
ಪೊತ್ತಾಲುದೇವ ದುಂದುಭಿಗಳು ಮೊರೆದವು । ವುತ್ತಮಗತಿ ಪಡೆದು
ದಕೇ ॥ ೧೨೯ ॥

ಯಿಂತೀ ಹೋಸದ ಕಥೆಯನು ಭವ್ಯರು । ಸಂತಸದಿಂದ ಲಾಲಿಪುದು ||
ಕಂತು ವಿಜಯ ಜಿನ ಅರ್ಹನ ಪದವನು । ಸಂತಸದಲಿ ಭಾವಿಸುತ || ೧೩೦ ||

ಹೋಸದ ವ್ರತವನು ನೇಮದಿ ಮಾಡಲು । ಶಾಶ್ವತ ಸುಖ ಮುಂದಹುದೂ ||
ಲೇಶವಹುದು ಸಂಸಾರ ಪರಿಗ್ರಹ । ನಾಶವಹುದು ಬೇಗದಲಿ || ೧೩೧ ||

## ಮಂಗಳ

ರಾಗ— ಕೇದಾರಗೌಳ.

ತಾಲ— ದೀಪಚಂದಿ ಮಾತ್ರಾ ೧೪.

ಮಂಗಳಂ ಜಯ ಮಂಗಳಂ ಜಯ ಮಂಗಳಂ ಜಿನರಾಜಗೇ ||
ಸಂಗ ಸಕಲವ ದೂರಗೈದ ಶ್ರೀ । ಚಂದ್ರನಾಥ ಜಿನೇಶಗೇ || ೧ ||

ಘೋರ ಕರ್ಮವ ನಳಿದು ನಿಂದು । ಚಾರುಮತಿಯಂದೆನಿಸಿದೆ ||
ಕ್ರೂರ ಮೋಹನ ಬಾಧೆಯಿಂ ನಾಂ । ಗಾರುಗೊಳುತಿಹೆ ಭುವಿಯೊಳು || ೨ ||

ಅಂತಕಾಂತಕನೆನಿಪ ಜಿನಪನೆ । ಕಂತು ಮದಹರ ಶಾಂತನೇ ||
ಸ್ವಾಂತ ಶುದ್ಧಿಯ ನಕಿದ ಬಾಳಿನಿಂ । ಸಂತಸವನಾ ನೀಗಿದೆ || ೩ ||

ರಾಜಪೂಜಿತ ತೇಜಗುಣನಿಧಿ । ಮೂಜಗಾಧಿಪ ರೊಡೆಯನೇ ||
ಓಜೆಯಿಂ ತವ ಧ್ಯಾನ ಮಾಳ್ಪವ । ನೀ ಜಗದೊಳುತ್ತಮನಲಾ || ೪ ||

ಕರಣ ಶುದ್ಧಿಯೋಳ್ ದೇವ ನಿನ್ನಯ । ಚರಣ ಸೇವೆಯ ನೆಸಗುವಾ ||
ಸಿರಿಯುಪುರ ಜಿನ ದತ್ತಪುತ್ರನ । ಕರುಣದಿಂ ನೀಂ ಪಾಲಿಸು || ೫ ||



॥ ಶ್ರೀ ವೀತರಾಗಾಯನಮಃ ॥

# ನಮ್ಮಲ್ಲಿ ದೊರೆಯುವ ಪುಸ್ತಕಗಳು.

---

೧ ಶ್ರೀ ಜಿನಸ್ತೋತ್ರಮಂಜರಿ. ಬೆಲೆ ೦-೨-೦

೨ ಶ್ರೀಜಿನ ಭಜನ ಸ್ತೋತ್ರಮಾಲಾ ,, ೦-೪-೦

ಬೇಕಾದವರು ತಮ್ಮ ಹೆಸರು ಅಡ್ಡಹೆಸರು, ಊರು, ತಾಲೂಕ, ಜಿಲ್ಹಾ ಪೋಷ್ಟು ಮೊದಲಾದವುಗಳನ್ನು ಸುವಾಚ್ಯ ಅಕ್ಷರಗಳಿಂದ ಚನ್ನಾಗಿ ತಿಳಿಯುವಂತೆ ಬರಿಯಬೇಕು.

ಕ್ರಯದ ಹೊರ್ತು ವ್ಹಿ. ಪಿ. ಚಾರ್ಜು ಬೇರೆ ಬೀಳುವದು.

ವ್ಯವಸ್ಥಾಪಕ,

**ಚಂದ್ರನಾಥ ಸಂಗೀತ ಸಮಾಜ**

ಬೋಗಾರಗಲ್ಲಿ

ಹುಬ್ಬಳ್ಳಿ

---

Printed at the Bharat Printing Works by L. S. Patil and published by Mr. M. N. Kasturi at The Shri Chandranath Sangeet Samaja Bogar Galli, Hubli.